# ಸೂಳ್ನುಡಿ ಸಂಪದ

ಅ. ಸಿ. ಹಿರೇಮಠ
ಸಂಪಾದಕರು.



ಚೆನ್ನಚೇತನ ಪ್ರಕಾಶನ, ಬೃಹಚ್ಛಿಲಾಮಠ, ಹೊನ್ನಾಳಿ.
ಪ್ರಕಾಶಕರು.

ಹೊನ್ನರಳಿಯ ದಳ – ಐದು





# ಸೂಳ್ನುಡಿ ಸಂಪದ



ಸಂಪಾದಕರು.
ಅ. ಸಿ. ಹಿರೇಮಠ ಎಂ.ಎ.
ರಾಣೇಬೆನ್ನೂರು.

ಪ್ರಕಾಶಕರು :
ಚೆನ್ನಚೇತನ ಪ್ರಕಾಶನ ಬೃಹಚ್ಛಿಲಾಮಠ, ಹೊನ್ನಾಳಿ
(ಕ್ರಿ. ಶ. ೧೯೯೦
ಶಾ. ಶ. ೧೯೧೨)

ಬೆಲೆ : ಆರು ರೂಪಾಯಿ ಮಾತ್ರ.

# "SULNUDI SAMPAD"

Author : A. S. Hiremath M.A.
Reader & Head of the Dept. of Psychology
R.T.E.S. College, Ranibennur.

Publisher : 'Chenna Chetana Prakashana'
Brihacchilamath, Honnali-577217
Dist Shimoga Karnataka State



1990

Copies : 1000

Price : Six Rupees only

Cover Design : Shri Siddhu Hiremath, Ranibennur.





ಮುದ್ರಕರು :
ಶ್ರೀ ಮಂಜುನಾಥ ಪ್ರಿಂಟರ್ಸ್, ರಾಣೇಬೆನ್ನೂರು

ಶ್ರೀಮತ್ ಕಾಶೀ ಜ್ಞಾನಸಿಂಹಾಸನಾಧೀಶ್ವರ
ಶ್ರೀ ೧೦೦೮ ಜಗದ್ಗುರು ಲಿಂ|| ವಿಶ್ವೇಶ್ವರ ಶಿವಾಚಾರ್ಯ
ಮಹಾಸ್ವಾಮಿಗಳವರ ಪವಿತ್ರಪಾದಾರವಿಂದಗಳಿಗೆ

## — ಅ ರ್ಪ ಣೆ. —



ಕನ್ನಡದ ಗಂಡದೆಯ ಕವಿ ಸರ್ವಜ್ಞ
ಸನ್ನುತದಿ ಬಾಳಿಬೆಳಗಿದ ಮಾಸೂರು
ನಿಮ್ಮ ತವರೂರು ಆಯಿತಾದರೂ
ಗಮ್ಮನೆ ಕಾಶೀಪೀಠಕ್ಕೈದು ಸಂಸ್ಕೃತವೋದಿ
ಎಮ್ಮೈದು ಪೀಠಗಳಲ್ಲೊಂದಾದ ಜ್ಞಾನಪೀಠದ
ಹೆಮ್ಮೆಯ ಜಗದ್ಗುರುವಾಗಿ ಮೆರೆದಿರೈ
ಹಮ್ಮು ಬಿಮ್ಮುಗಳಿಲ್ಲದೆಯೆ ಸದಾ
ಹಸನ್ಮುಖಿಯಾಗಿ ಹಸನಾದ ಬಾಳ ಬಾಳಿದ
ಹಸುಗೂಸಿನಂತಪ್ಪ ವಿಶ್ವೇಶ್ವರರಿಗೆ
ಎಸೆವ ಹೊನ್ನಾಳಿ ಚೆನ್ನಚೇತನದೈದನೆಯ
ಎಸಳರ್ಪಿಸಿ ಹರಸಿರೈ ಜಗದ್ಗುರುಗಳೇ
ಉಸಿರಿರುವನಕ ಎಂದಡಿಗಡಿಗೆ ಬೇಡುವೆವು.

ಬೃಹಚ್ಛಿಲಾಮಠ, ಹೊನ್ನಾಳಿ
೨೮—೯—೯೦

ಪ್ರಕಾಶಕರು
ಚೆನ್ನಚೇತನ ಪ್ರಕಾಶನ

# ಶ್ರೀಪಂಚಾಚಾರ್ಯ ಜ್ಞಾನ ಸಿಂಹಾಸನಾಧೀಶ್ವರ ಶ್ರೀ ೧೧೦೦೮ ಜಗದ್ಗುರು ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳವರ



## ಶುಭಾಶೀರ್ವಾದ ಸಂದೇಶ

ಜಗತ್ತಿನಲ್ಲಿ ಜನ್ಮತಾಳಿದ ಪ್ರತಿಯೊಬ್ಬ ಮನುಷ್ಯನು ಭೌತಿಕ ಸಂಪತ್ತಿನ ಪ್ರಾಪ್ತಿಗಾಗಿ ಹಗಲಿರುಳು ಪರಿತಪಿಸುತ್ತಿರುತ್ತಾನೆ. ವಾಸ್ತವಿಕವಾಗಿ ವಿಚಾರಮಾಡಿದರೆ ಭೌತಿಕವಾದ ಸಂಪತ್ತು ಸಂಪತ್ತಾಗಿರದೇ ಅದೊಂದು ಜಗಕ್ಕಿಕ್ಕಿದ ವಿಧಿ ಎಂಬ ಮಾತನ್ನು ಅನುಭಾವಿಗಳು ತಿಳಿಸಿದ್ದಾರೆ. ಈ ವಿಧಿಯ ಬೆನ್ನಹತ್ತಿ ಇಂದಿನ ಮನುಷ್ಯ ಸಮಾಜವೆಲ್ಲ ಮಹಾದುಃಖದತಗ್ಗಿನಲ್ಲಿ ಬಿದ್ದು ಹೊರಳಾಡುತ್ತಿದೆ. ಅಂತೆಯೇ ಈ ದುಃಖದ ಕುಳಿಯಿಂದ ಮನುಷ್ಯ ಸಮಾಜ-ವನ್ನು ಎತ್ತುವದಕ್ಕಾಗಿ ವೀರಶೈವ ಮಹಾಚಾರ್ಯರು, ಶರಣರು ಅನೇಕ ಅನುಭವದ ನುಡಿಗಳನ್ನು ಜಗತ್ತಿಗೆ ಉಪದೇಶಿಸಿದ್ದಾರೆ. ಆ ನುಡಿಗಳೇ ನಿಜ-ವಾದ ಸಂಪತ್ತು ! ಇಂತಹ ಸಂಪತ್ತನ್ನು ಸಂಪಾದಿಸಿದ ಮನುಷ್ಯನಂತಹ ಶ್ರೀಮಂತ ಜಗತ್ತಿನಲ್ಲಿ ಬೇರೊಬ್ಬನಿಲ್ಲ.

"ದೇವರನ್ನು ಸ್ಮರಿಸುವದೇ ಸಂಪತ್ತು ಆತನನ್ನು ಮರೆಯುವದೇ ವಿಪತ್ತು" ಎಂಬ ಇನ್ನೊಂದು ಮಾತನ್ನು ಆಂಜನೇಯನೇ ಜಗತ್ತಿಗೆ ಸಾರಿ ಹೇಳಿದ್ದಾನೆ. ಇಂತಹ ಅಮೂಲ್ಯವಾದ ಸಂಪತ್ತು ಅಲ್ಲಲ್ಲಿ ಚೆಲ್ಲಿರುವದನ್ನು ನೋಡಿ ಇದನ್ನು ಒತ್ತಟ್ಟಿಗೆ ಸಂಗ್ರಹಿಸಿದರೆ ತನಗೂ ತನ್ನ ಸಮಾಜಕ್ಕೂ ಉಪಯೋಗವಾಗುವದೆಂಬ ಉದ್ದೇಶದಿಂದ ಪ್ರೊ. ಅ.ಸಿ. ಹಿರೇಮಠರು ಬಹಳ ಪರಿಶ್ರಮ ವಹಿಸಿ "ಸೂಳ್ನುಡಿ ಸಂಪದ" ಎಂಬ ಚಿಕ್ಕಗ್ರಂಥದಲ್ಲಿ ಸ್ತುತಿಗೀತ ಗುಚ್ಛ, ವಚನವಲ್ಲರಿ ಮತ್ತು ಮಂಗಲ ಗೀತೆಮಾಲೆ ಎಂಬ ಮೂರು ತರಹದ

ಸಂಪತ್ತುಗಳನ್ನಳವಡಿಸಿದ್ದಾರೆ. ಅಮೂಲ್ಯವಾದ ಸಂಪತ್ತನ್ನು ಭದ್ರವಾಗಿ ತಿಜೋರಿಯಲ್ಲಿ ಗುಪ್ತವಾಗಿಟ್ಟು ಪ್ರಸಂಗ ಬಂದಾಗ ಬಳಸುವಂತೆ ಈ ಗ್ರಂಥದಲ್ಲಿಯ ಈ ಮೂರು ವಿಧವಾದ ಸಂಪತ್ತನ್ನು ಕಂಠಪಾಠ ಮಾಡಿ ಹೃದ-ಯವೆಂಬ ತಿಜೋರಿಯಲ್ಲಿ ಇಟ್ಟುಕೊಂಡು ಪ್ರತಿದಿನ ಮಂಗಲ ಪ್ರಸಂಗಗಳಲ್ಲಿ ಅವುಗಳನ್ನು ಬಳಸುತ್ತ ಮಂಗಲಕರ ಜೀವನವನ್ನು ಸಾಗಿಸಿದರೆ ಅವುಗಳ ಸಂಗ್ರಹಕಾರರಾದ ಅ.ಸಿ. ಹಿರೇಮಠರ ಪರಿಶ್ರಮ ಸಾರ್ಥಕವಾಗುವದು. ಕಾರಣ ಪ್ರತಿಯೊಬ್ಬ ಭಕ್ತನು ಈ ಗ್ರಂಥವನ್ನು ಖರೀದಿಸಿ ಇದರಲ್ಲಿಯ ಸ್ತುತಿಗಳನ್ನು, ಗೀತೆಗಳನ್ನು ವಚನಗಳನ್ನು, ಮಂಗಲಪದ್ಯಗಳನ್ನು ಮನದುಂಬಿ ಹಾಡಿ ಕೃತಾರ್ಥರಾಗಿರಿ.

ಈ "ಸೂಳ್ನುಡಿ ಸಂಪದ" ದ ಸಂಗ್ರಾಹಕರಿಗೆ ಈ ಗ್ರಂಥ ಮುದ್ರಣ ಸೇವೆಯನ್ನು ಸಲ್ಲಿಸಿದ ಶ್ರೀಮತಿ ಸಿದ್ಧಲಿಂಗಮ್ಮ ಬಸಪ್ಪ ಬನಾಪುರ ಹಲಗೇರಿ ಇವರಿಗೆ ಹಾಗೂ ಈ ಗ್ರಂಥವನ್ನು ಖರೀದಿಸಿ ಸದುಪಯೋಗ ಮಾಡಿಕೊಂಡ ಎಲ್ಲರಿಗೂ ಶ್ರೀ ಜಗದ್ಗುರು ವಿಶ್ವಾರಾಧ್ಯರು ಹಾಗೂ ಕಾಶೀ ವಿಶ್ವನಾಥ ಅನ್ನಪೂರ್ಣಾ ದೇವಿಯರು ಆಯುರಾರೋಗ್ಯಭಾಗ್ಯಗಳನ್ನು ಕೊಟ್ಟು ಕರುಣಿಸಲೆಂದು ಹಾರೈಸಲಾಗಿಡೆ.

ಮುಕ್ಕಾಮು : ರಾಣೇಬೆನ್ನೂರು — ಇತ್ಯಾನಂತಶಿವಾಶಿಷ:

೨೮—೯—೯೦

# ಸನ್ನುಡಿ.

"ಸೊಳ್ನುಡಿ ಸಂಪದ" ಭಕ್ತಿಗೀತೆಗಳ, ವಚನಗಳ ಹಾಗೂ ಮಂಗಳಾರತಿ ಪದಗಳ ಒಂದು ಸಂಕಲನ ! ಬಗೆಬಗೆಯ ಹೂಗಳನ್ನು ಆಯ್ದು ತಂದು ಹೂಮಾಲೆ ಕಟ್ಟುವ ಹೂಗಾರನ ಕಾರ್ಯವನ್ನು ನಾನು ಮಾಡಿದ್ದೇನೆ ಆ ಮಾಲೆ ಸುಂದರವಾಗಿದೆಯೋ ಇಲ್ಲವೋ ನಾನರಿಯೆ ! ಆದರೆ ಆ ಮಾಲೆ-ಯನ್ನು ಮುಡಿದು ಮೂಸಿ ಮೃಡನಡಿಗಳನ್ನು ಕಾಣಬೇಕೆಂಬುದೇ ನನ್ನ ಬಲವಾದ ಬಯಕೆ.

ಚಲನಚಿತ್ರಗಳು, ಆಕಾಶವಾಣಿ, ದೂರದರ್ಶನಗಳು ತಮ್ಮ ಕಾರ್ಯಕ್ರಮದ ಬಹುಸಮಯವನ್ನು ಚಿತ್ರಗೀತೆಗಳ ಪ್ರಸಾರಕ್ಕಾಗಿಯೇ ಮೀಸಲಿಡುತ್ತವೆ. ಧ್ವನಿ ಸುರುಳಿಗಳ ಹಾವಳಿಯಂತೂ ಹೇಳತೀರದು. ಆ ಚಿತ್ರ ಗೀತೆಗಳೋ ವಿಚಿತ್ರಗೀತೆಗಳು! ಜನಮನವನ್ನು ಕಲಕಿ ಭಾವೋದ್ವೇಗಕ್ಕೆ ಒಳ-ಪಡಿಸುತ್ತವೆ. ಸಿನಿಮಾ ನೋಡಿದ ಜನ ಅದನ್ನೇ ಅನುಸರಿಸಲು ಪ್ರಯತ್ನಿಸು ತ್ತಾರೆ- ಅಂಥವರು ಇಂಥ ಸೊಳ್ನುಡಿಗಳನ್ನು ಆಲಿಸಬಹುದೇ ? ಹಾಡಿ ಪಾಡಿ ಆನಂದಿಸಬಹುದೇ ? ಎಂಬ ಶಂಕೆ ನನಗೂ ಉಂಟು. ಆದರೆ ಹೊನ್ನಾಳಿಯ ಹಿರೇಕಲ್ಮಠದ ಇಂದಿನ ಸ್ಥಿರಪಟ್ಟಾಧ್ಯಕ್ಷರಾದ ಶ್ರೀ ಒಡೆಯರ್ ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳವರ ಅಪ್ಪಣೆಯಂತೆ ಈ ಸಂಪಾದನೆಯ ಹೊಣೆ ಹೊತ್ತಿದ್ದೇನೆ. ಅದರ ಯಶಾಪಯಶ ಅವರಿಗೆ ಸಲ್ಲಬೇಕು.

"ಶ್ರದ್ಧಾವಾನ್ ಲಭತೇ ಜ್ಞಾನಂ" ಎಂಬಂತೆ ಶ್ರದ್ಧೆಯಿದ್ದರೆ ಶುದ್ಧ ಧರ್ಮತತ್ವಗಳ ಪದ ಪದ್ಯಗಳನ್ನು ಶಿವಶರಣರ ವಚನಗಳನ್ನು ಅಧ್ಯಯನ ಮಾಡುವ ಅಭಿಲಾಷೆ ಉಂಟಾಗುತ್ತದೆ. ಅಂಥ ಶ್ರದ್ಧೆ ಅಧ್ಯಯನಶೀಲತೆ ಹಾಗೂ ಸದ್ಬುದ್ಧಿಯನ್ನು ಶ್ರೀ ಜಗದ್ಗುರು ಪಂಚಾಚಾರ್ಯರು ಜನತೆಗೆ, ಅದರಲ್ಲೂ ಯುವಪೀಳಿಗೆಗೆ, ಅನುಗ್ರಹಿಸಲೆಂದು ಹಾರೈಸುವೆ.

"ಸದಭಿರುಚಿ ಸದ್ಭಕ್ತಿಗೆ ಮೂಲ" ಎಂದೇ ನಂಬಿರುವ ನಾನು ಅಭಿರುಚಿ-ಅಭಿಲಾಷೆಗಳಿಗನುಸರಿಸಿ ಕೆಲವು ಪದ ಪದ್ಯಗಳನ್ನು ವಚನಗಳನ್ನು

ಆಯ್ದು ಓದುಗರ ಮುಂದಿಡುವ ಪ್ರಯತ್ನ ಮಾಡಿದ್ದೇನೆ ಅವುಗಳ ಅರ್ಥ-ವರಿದು ನುಡಿದರೆ ಹಾಗೂ ಅದರಂತೆ ನಡೆದರೆ ಇದೇ ಜನ್ಮ ಕಡೆಯಾಗಬಹು-ದೆಂಬ ನಂಬಿಕೆ ನನಗಿದೆ.

ಈ ಕಿರುಕೃತಿಗೆ ಪರಮಪೂಜ್ಯ ಶ್ರೀಮತ್ ಕಾಶೀ ಜ್ಞಾನ ಸಿಂಹಾಸನಾಧೀಶ್ವರ ಶ್ರೀ ೧೦೦೮ ಜಗದ್ಗುರು ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳು ಶುಭಾಶೀರ್ವಾದ ಸಂದೇಶ ದಯಪಾಲಿಸಿದುದು ಕೃತಿಯ ಹಿರಿಮೆಯನ್ನು ಹೆಚ್ಚಿಸಿದೆ. ಅಂತಪ್ಪ ಶ್ರೀ ಪಾದಂಗಳಿಗೆ ಸಾಷ್ಟಾಂಗ ಪ್ರಣಾಮಗಳು.

ಉತ್ತಮೋತ್ತಮ ಗೀತೆಗಳನ್ನು ರಚಿಸಿದ ಕವಿಗಳಿಗೂ ವಚಿಸಿದ ವಚನಕಾರರಿಗೂ ನಾಡಿಗೆ ನಾಡೇ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸ-ಬೇಕು ಅಂಥವರಲ್ಲಿ ನಾನೂ ಒಬ್ಬ ಎಂದು ವಿನೀತಭಾವದಿಂದ ಹೇಳುತ್ತಿದ್ದೇನೆ.

ಸಹಕರಿಸಿದ ಸಕಲರಿಗೂ ಸದಭಿಮಾನದ ಅಭಿನಂದನೆಗಳು.

ರಾಣೇಬೆನ್ನೂರು
೨೮-೯-೯೦

ಸದುವಿನಯದೊಂದಿಗೆ ತಮ್ಮವನೇ
ಅ.ಸಿ. ಹಿರೇಮಠ.



# ಚೆನ್ನುಡಿ.

ಧರ್ಮವೇ ಜಗದಿ ಮೂಲ
ಧರ್ಮವೇ ಜೀವನದ ಸೂತ್ರ
ಧರ್ಮವೆಮ್ಮಯ ಬಾಳಿನ ಬೆಳಕು

ಚೆನ್ನಚೇತನ ಪ್ರಕಾಶನದ ಐದನೆಯ ದಳವಾದ "ಸೊಳ್ನುಡಿ ಸಂಪದ" ವನ್ನು ಓದುಗರಿಗೆ ನೀಡಲು ಆನಂದವೆನಿಸುತ್ತದೆ- ಚಲನಚಿತ್ರ ಪ್ರಪಂಚದ ಪರಿಸರದ ಪ್ರಭಾವಕ್ಕೊಳಗಾಗಿ ಸಾಮಾನ್ಯವಾಗಿ ಮಕ್ಕಳೆಲ್ಲರೂ ಚಲನಚಿತ್ರಗೀತೆಗಳನ್ನೇ ಹಾಡುತ್ತಿರುವದು ಕಾಣಬರುತ್ತದೆ- ಇದೇ ಹವ್ಯಾಸ ಪ್ರವರ್ಧಮಾನವಾದರೆ ಕ್ರಮೇಣ ಭಕ್ತಿಗೀತೆಗಳು ಸ್ತುತಿ ಪದ್ಯಗಳು ವಸ್ತು ಸಂಗ್ರಹಾಲಯದ ಪ್ರದರ್ಶನ ವಸ್ತುಗಳಾಗಬಹುದೇನೋ ಎನ್ನುವ ಅನುಮಾನ ಉಂಟಾಗುತ್ತದೆ. ನಮ್ಮ ಶ್ರೀಮಠದಲ್ಲಿ ಪ್ರತಿವರುಷ ಶ್ರಾವಣ ಮಾಸದಲ್ಲಿ ಏರ್ಪಡಿಸುತ್ತಿರುವ ಭಕ್ತಿಗೀತೆ ಹಾಗೂ ವಚನಗಾಯನ ಸ್ಪರ್ಧೆಯಲ್ಲಿ ಮಕ್ಕಳು ಹಾಡುತ್ತಿರುವ ಹಾಡು ಹಾಗೂ ದಾಟಿಗಳನ್ನು ಕೇಳಿದಾಗ ಕಸಿವಿಸಿ ಎನಿಸುತ್ತದೆ. ಕೆಲವು ಉತ್ತಮ ಭಕ್ತಿಗೀತೆಗಳನ್ನು ಕೆಲವು ವಚನಗಳನ್ನು ಹಾಗೂ ಮಂಗಳಾರತಿ ಪದಗಳನ್ನು ಆಯ್ದು ಒಂದು ಕಿರುಪುಸ್ತಕವನ್ನು ಸಿದ್ಧಪಡಿಸಲು ರಾಣೇಬೆನ್ನೂರಿನ ಪ್ರಾಧ್ಯಾಪಕರಾದ ಶ್ರೀ ಅ ಸಿ. ಹಿರೇಮಠ ಅವರಿಗೆ ಆದೇಶ ನೀಡಲಾಯಿತು. ಅವರು ಶ್ರದ್ಧಾಭಕ್ತಿಯಿಂದ ಸೂಕ್ತವಾದ ಸರಳವಾದ ಗೀತೆಗಳನ್ನು ಮತ್ತು ವಚನಗಳನ್ನು ಸಂಗ್ರಹಿಸಿ "ಸೊಳ್ನುಡಿ ಸಂಪದ" ಎಂಬ ಹೆಸರನ್ನಿಟ್ಟು ಸಂಪಾದನೆ ಕಾರ್ಯವನ್ನು ಸಮರ್ಥವಾಗಿ ನೆರವೇರಿಸಿದ್ದಾರೆ. ಅವರಿಗೆ ಶ್ರೀ ಜಗದ್ಗುರು ಪಂಚಾಚಾರ್ಯರು ಆಯುರಾರೋಗ್ಯ ಭಾಗ್ಯ ಗಳನ್ನು ಅನುಗ್ರಹಿಸಲಿ.

ಪುಸ್ತಕದ ಹಸ್ತಪ್ರತಿಯೇನೋ ಸಿದ್ಧವಾಯಿತು ಆದರೆ ಅದರ ಮುದ್ರಣ ವೆಚ್ಚವನ್ನು ವಹಿಸಿಕೊಂಡು ಸೇವೆಮಾಡುವ ಭಕ್ತರಿಗಾಗಿ ಆಲೋಚಿಸುತ್ತಿರುವಾಗಲೇ ನಮ್ಮ ಶ್ರೀಮಠದ ಖಾಸಾ ಭಕ್ತರೂ ಕಾಯಕ ಶೀಲರೂ ಸದಾಚಾರಸಂಪನ್ನರೂ ಆದ ಹಲಗೇರಿ ವಾಸಿ ಶ್ರೀ ನಂದ್ಯಪ್ಪನವರು, ಶಿವಪ್ಪನವರು ಮತ್ತು ಪಂಚಪ್ಪನವರು ಬನಾಪುರ ಅವರು ತಮ್ಮ ತಾಯಿ ಶ್ರೀಮತಿ ಸಿದ್ಧಲಿಂಗಮ್ಮ ಬಸಪ್ಪ ಬನಾಪುರ ಅವರ ಹೆಸರಿನಲ್ಲಿ ಸೇವೆಸಲ್ಲಿಸಲು ಮುಂದೆ

ಬಂದರು. ಅವರಿಗೆ ಅವರ ಆರಾಧ್ಯಗುರುವಾದ ಶ್ರೀ ಚನ್ನಮಲ್ಲಿಕಾರ್ಜುನ ಸ್ವಾಮಿಯು ಇನ್ನೂ ಹೆಚ್ಚಿನ ಆಯುರಾರೋಗ್ಯ ಭಾಗ್ಯಾದಿಗಳನ್ನು ಕರುಣಿಸ ಲೆಂದು ಅಂತಃಕರಣಪೂರ್ವಕವಾಗಿ ಹರಸಲಾಗಿದೆ.

ಶ್ರೀ ಮತ್ ವೀರಶೈವ ಮಹಾಮತ ಸ್ಥಾಪನಾಚಾರ್ಯವರ್ಯರಾದ ಶ್ರೀ ಜಗದ್ಗುರು ಪಂಚಪೀಠಾಧೀಶ್ವರರ ಪರಂಪರೆಯಲ್ಲಿ ಒಬ್ಬರಾದ ಶ್ರೀಮತ್ ಕಾಶೀಜ್ಞಾನ ಸಿಂಹಾಸನಾಧೀಶ್ವರ ಶ್ರೀ ಜಗದ್ಗುರು ವಿಶ್ವೇಶ್ವರ ಶಿವಾ-ಚಾರ್ಯ ಮಹಾಸನ್ನಿಧಿಯವರು ಕಳೆದ ದಿನಾಂಕ ೨-೧೦-೮೯ ಸೋಮವಾರ (ಶಾ.ಶ. ೧೯೧೧ ಶುಕ್ಲನಾಮ ಸಂ|| ಆಶ್ವೀಜ ಶುದ್ಧ ಬಿದಿಗಿ ಉಪರಿ ತದಿಗಿ) ರಾತ್ರಿ ೧೦-೩೦ ಕ್ಕೆ ಪುಣೆಯ ಶ್ರೀಜಂಗಮವಾಡಿ ಮಠದಲ್ಲಿ ಲಿಂಗೈಕ್ಯರಾದುದು ನಮ್ಮ ದು:ಖವನ್ನಿನ್ನೂ ಶಮನಗೊಳಿಸಿಲ್ಲ ಅಂಥಪವಿತ್ರಾತ್ಮರ ಪ್ರಥಮ ವಾರ್ಷಿಕ ಲಿಂಗೈಕ್ಯ ದಿನಾಚರಣೆಯನ್ನು ದಿನಾಂಕ ೨೧-೯-೧೯೯೦ ರಂದು ರಾಣೀಬೆನ್ನೂರು ನಗರದಲ್ಲಿ ವೈಭವೋಪೇತವಾಗಿ ಶ್ರದ್ಧಾಭಕ್ತಿಯಿಂದ ಆಚರಿಸಿ-ದುದು ನಮ್ಮ ಮನಸ್ಸಿಗೆ ಅತೀವ ಆನಂದವನ್ನುಂಟುಮಾಡಿದೆ ಅಂತೆಯೇ ನಮ್ಮ ಪ್ರಕಾಶನವು ಲಿಂಗೈಕ್ಯ ಜಗದ್ಗುರುಗಳ ಸನ್ನಿಧಾನಕ್ಕೆ ತನ್ನ ಈ ಕಿರು ಕೃತಿಯನ್ನು ಸಮರ್ಪಿಸುತ್ತಲಿದೆ.

ಈ ಕಿರುಕೃತಿಗೆ ಕಿರೀಟವಿಟ್ಟಂತೆ ಶ್ರೀಮತ್ ಕಾಶೀ ಜ್ಞಾನಸಿಂಹಾ ಸನಾಧೀಶ್ವರ ಶ್ರೀ ೧೦೦ೞ ಜಗದ್ಗುರು ಚಂದ್ರಶೇಖರ ಶಿವಾಚಾರ್ಯ ಮಹಾ ಸ್ವಾಮಿಗಳವರು ತಮ್ಮ ಶುಭಾಶೀರ್ವಾದ ಸಂದೇಶ ದಯಪಾಲಿಸಿದುದಕ್ಕಾಗಿ ಪ್ರಕಾಶನದ ಪರವಾಗಿ ಶಿರಸಾಷ್ಟಾಂಗ ಪ್ರಣಾಮುಗಳೊಂದಿಗೆ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ಸಕಾಲಕ್ಕೆ ಮುದ್ರಣಕಾರ್ಯ ಮಾಡಿಕೊಟ್ಟ ರಾಣೀಬೆನ್ನೂರಿನ ಶ್ರೀ ಮಂಜುನಾಥ ಪ್ರಿಂಟರ್ಸ ಹಾಗೂ ಮುಖಪುಟದ ನಕ್ಷೆ ತಯಾರಿಸಿದ ಶ್ರೀ ಸಿದ್ಧು ಹಿರೇಮಠ ಮತ್ತು ಸೇವೆ ಸಲ್ಲಿಸಿದ ಎಲ್ಲರಿಗೂ ಮಂಗಲಪರಂಪರೆ ಯನ್ನು ಶ್ರೀ ಜಗದ್ಗುರು ಜಡೆಯಶಂಕರ ಶಿವಾಚಾರ್ಯ ಮಹಾಸ್ವಾಮಿಗಳು ಮತ್ತು ಕರ್ತೃ ಶ್ರೀ ಚನ್ನಮಲ್ಲಿಕಾರ್ಜುನ ಶಿವಾಚಾರ್ಯ ಮಹಾಸ್ವಾಮಿಗಳು ದಯಪಾಲಿಸಲಿ.

ಭಕ್ತಸಮೂಹವು, ಅದರಲ್ಲೂ ವಿಶೇಷವಾಗಿ ಶಾಲಾಮಕ್ಕಳು ಇಂಥ ಉತ್ತಮ ಸಾಹಿತ್ಯಕೃತಿಗಳನ್ನು ಕೊಂಡು ಓದಲಿ ; ಹಾಡಿನಲಿಯಲಿ ಎಂದು ಹಾರೈಸುತ್ತೇವೆ.

ಹಿರೇಕಲ್ಮಠ-ಹೊನ್ನಾಳಿ. ಇತ್ಯಾಶಿಷ:

ದಿನಾಂಕ ೨೮-೯-೯೦ ಶ್ರೀ ಒಡೆಯರ್ ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳು



ಗ್ರಂಥಪ್ರಕಟಣಾ ಸೇವಾಕರ್ತೆ

## ಶ್ರೀಮತಿ ಸಿದ್ಧಲಿಂಗಮ್ಮ ಬಸಪ್ಪ ಬನಾಪುರ. ಹಲಗೇರಿ

ನ್ಯಾಮತಿಯಿಂದ ಹಲಗೇರಿಗೆ 40 ವರ್ಷಗಳ ಹಿಂದೆ ವಲಸೆಬಂದ ವರಂತೆ ಬಂದರೂ ಇಂದು ಹಲಗೇರಿಯಲ್ಲಿಯೇ ನೆಲೆನಿಂತು ತಲೆಯೆತ್ತಿ ಬಾಳು ತ್ತಿರುವ ಮನೆತನವೇ ಬನಾಪುರಡವರ ಮನೆತನ !

ಶ್ರೀ ಬಸಪ್ಪನವರು 1936 ರಲ್ಲಿಯೇ ನಿಧನರಾದರು. ಪತಿಯನ್ನ-ಗಲಿದ ಸತಿ ಸಿದ್ಧಲಿಂಗಮ್ಮ ತನ್ನ ಐವರು ಮಕ್ಕಳಾದ ಹಾಲಮ್ಮ, ನಂದ್ಯಪ್ಪ, ಅನ್ನಪೂರ್ಣಮ್ಮ, ಶಿವಪ್ಪ ಹಾಗೂ ಪಂಚಪ್ಪ ಅವರೊಂದಿಗೆ ತನ್ನ ತವರೂ-ರಾದ ಹಲಗೇರಿಗೆ ಬಂದಳು. ತವರಿನವರು ಪ್ರತಿಷ್ಠಿತ ಅಂದನೂರು ಮನೆತನದ ಮಲ್ಲಶೆಟ್ಟೆಪ್ಪನವರು ಅವರ ಮಗ ವೀರಪ್ಪನವರು ಶ್ರೀ ಹಾಲಸಿದ್ಧೇಶ್ವರ ಜನ್ನಿಂಗ್ ಫ್ಯಾಕ್ಟರಿ ಮಾಲಕರು, ಮೇಲಾಗಿ ಸ್ಥಿತಿವಂತರು ಹಾಗೂ ಗುಣ-ವಂತರು ! ಅಂತೆಯೇ ಕಷ್ಟದಲ್ಲಿದ್ದ ತಂಗಿ ಹಾಗೂ ಅಳಿಯಂದಿರಿಗೆ ಆಶ್ರಯ ವಿತ್ತು ಪಾಲನೆ ಪೋಷಣೆ ಮಾಡಿದರು. ಅಳಿಯಂದಿರಿಗೆ ವ್ಯವಹಾರ ರೀತಿ-ನೀತಿಗಳನ್ನು ಕಲಿಸಿದರು. ಇಂದು ಶ್ರೀ ನಂದ್ಯಪ್ಪನವರು ಹತ್ತಿ, ಅರಳಿ ವ್ಯಾಪಾರದಲ್ಲಿಯೂ ಶ್ರೀ ಶಿವಪ್ಪನವರು ಔಷಧ ಅಂಗಡಿಯಲ್ಲಿಯೂ ಮತ್ತು ಶ್ರೀ ಪಂಚಪ್ಪನವರು ಕಿರಾಣಿ ವ್ಯಾಪಾರದಲ್ಲಿಯೂ ಪ್ರಾಮಾಣಿಕ ದುಡಿಮೆ ಮಾಡುತ್ತ ತಾವೂ "ಮನುಷ್ಯ" ರಾಗಿ ನೆಮ್ಮದಿಯಿಂದ ಬಾಳುತ್ತಲಿದ್ದಾರೆ.

"ದುಡಿತವೇ ದುಡ್ಡಿನ ತಾಯಿ" ಎಂಬುದರಲ್ಲಿ ಅಚಲವಿಶ್ವಾಸವಿಟ್ಟ ಮೂವರೂ ಸಹೋದರರು ಪರಿಶ್ರಮ:ದ ದುಡಿಮೆಯ ಅನುಭವ ಹಾಗೂ ಫಲವನ್ನು ತಮ್ಮ ತಮ್ಮ ಮಕ್ಕಳೊಂದಿಗೆ ಹಂಚಿಕೊಂಡು ಹಾಯಾಗಿ ತುಂಬು ಜೀವನ ಸಾಗಿಸುತ್ತಿದ್ದಾರೆ.

ತಂದೆಯನ್ನು ಕಳೆದುಕೊಂಡು ತಬ್ಬಲಿಗಳಾಗಿದ್ದ ತಮ್ಮನ್ನು ತಮ್ಮ ತಾಯಿ ಸಿದ್ಧಲಿಂಗಮ್ಮ ತನ್ನ ಜೀವ ವತ್ತೆ ಇಟ್ಟು ಬೆಳೆಸಿದುದನ್ನು ಇಂದಿಗೂ ಮರೆಯದ ಮಾತೃ ಭಕ್ತರಿವರು ! ತಾಯಿಯೇ ದೇವರು ! ಎಂದು ನೆರೆನಂಬಿದ ಸೋದರರು ಉದಾರತೆಗೆ, ದೈವಭಕ್ತಿಗೆ, ಗುರುಲಿಂಗ ಜಂಗಮರ ಸೇವೆಗೆ ಸದಾ ಕಂಕಣ ಬದ್ಧರೆಂಬುದು ಅವರನ್ನು ಬಲ್ಲವರೆಲ್ಲರಿಗೂ ಚೆನ್ನಾಗಿ ಗೊತ್ತು! ಹೊನ್ನಾಳಿ ಶ್ರೀ ಚನ್ನಮಲ್ಲಿಕಾರ್ಜುನ ಸ್ವಾಮಿ ಅವರ ಆರಾಧ್ಯ ದೈವ ಅದು ಕಾರಣವೇ ಹೊನ್ನಾಳಿ ಚೆನ್ನಚೇತನ ಪ್ರಕಾಶನದ ೫ ನೇ ದಳವಾದ "ಸೂಳ್ನುಡಿ ಸಂಪದ" ಗ್ರಂಥದ ಸಂಪೂರ್ಣ ಮುದ್ರಣ ವೆಚ್ಚವನ್ನು ಅವರೇ ವಹಿಸಿಕೊಂಡಿದ್ದಾರೆ. ಅವರಿಗೂ ಅವರ ಕುಟುಂಬ ವರ್ಗಕ್ಕೂ ಶ್ರೀ ಜಗದ್ಗುರು ಪಂಚಾಚಾರ್ಯರು ಆಯುರಾರೋಗ್ಯ ಸಂಪದಭಿವೃದ್ಧಿ ಹಾಗೂ ಸದಾಚಾರ ಸಂಪನ್ನತೆಯನ್ನು ಅನುಗ್ರಹಿಸಲೆಂದು ಹರಸಲಾಗಿದೆ-

ಹೊನ್ನಾಳಿ

ಚೆನ್ನಚೇತನ ಪ್ರಕಾಶನ
ಬೃಹಚ್ಛಿಲಾಮಠ



|| ಶ್ರೀ ಜಗದ್ಗುರು ಪಂಚಾಚಾರ್ಯಾ: ಪ್ರಸೀದಂತು ||

# ಸೊಳ್ಳುಡಿ ಸಂಪದ.

## ಪ್ರಥಮ ಸಂಪದ – ಸ್ತುತಿಗೀತಗುಚ್ಛ

### ಶ್ರೀ ಗುರು ಸ್ತುತಿ.

ಗುರುದೇವೋ ಮಹಾದೇವೋ ಗುರುದೇವಸ್ಸದಾಶಿವಃ ।
ಗುರುದೈವಾತ್ ಪರಂ ನಾಸ್ತಿ ತಸ್ಮೈ ಶ್ರೀ ಗುರವೇ ನಮಃ ॥

ಪಂಚಾನನ ತನೂದ್ಭೂತಾನ್ ಪಂಚಾಕ್ಷರಮನೂಪಮಾನ್ ।
ಪಂಚಸೂತ್ರ ಕೃತೋವಂದೇ ಪಂಚಾಚಾರ್ಯಾನ್ ಜಗದ್ಗುರೂನ್ ॥

ಶ್ರೀಗುರುವೆ ಸತ್ಕ್ರಿಯೆಯ ಆಗರವೆ ಸುಜ್ಞಾನ
ಸಾಗರವೆ ಎನ್ನಮತಿಗೆ ಮಂಗಳವಿತ್ತು
ರಾಗದಿಂ ಬೇಗ ಕೃಪೆಯಾಗು.

ಗುರುವೆ ಭಕ್ತರ ಕಲ್ಪತರುವೆ ಸಜ್ಜನಮನೋ-
ಹರವೆ ನಿಜಭಕ್ತಿ ಜ್ಞಾನ ವೈರಾಗ್ಯ ಮಂ-
ದಿರವೆ ಮದ್ಗುರುವೆ ಕೃಪೆಯಾಗು.

ನ ಗುರೋರಧಿಕವೆಂದು ಜಗದಲ್ಲಿ ಸಾರುತಿಹ
ನಿಗಮ ಶ್ರುತಿಗೇಳಿ ಗುರುವೆ ನಾ ನಿಮ್ಮ ಪದ-
ಯುಗವ ಬಣ್ಣಿಪೆನು ಕೃಪೆಯಾಗು.

ನರಜೀವಿಗಳಿಗೊರ್ವ ಹರನೆ ಕಾರಣಕರ್ತ
ಶರಣಸಂತತಿಗೆ ಗುರುವೆ ನೀ ಕರ್ತನೆಂ–
ದೆರಗಿರ್ಪೆನಡಿಗೆ ಕೃಪೆಯಾಗು.

ಬಾಗಿ ಗುರುಚರಣವನು ಬೇಗದಿಂದಲಿ ಭಜಿಸಿ
ಆಗಮಾತೀತನೊಳು ಭವವ ದಾಂಟಿದನು
ಭೋಗದೊಳಗಿಹನೆ ಸರ್ವಜ್ಞ

ಹಲವು ಯೋನಿಗಳಲ್ಲಿ ಹೊಲಬರಿಯದುದಿಸಿದೆನು
ಮಲರಹಿತನಾದ ಗುರುರಾಯ ಪರಿಭವದ
ಬಲೆಯಿಂದ ಬಿಡಿಸೊ ಸರ್ವಜ್ಞ

ಹಿಂದಿನ ಜನುಮದಲಿ ಎಂದೊ ಲೇಸನು ಮಾಡಿ
ಇಂದು ನಿಮ್ಮಡಿಗೆ ಎರಗಿದೆನು ಗುರುವೆ ಭವ
ಬಂಧನವ ಬಿಡಿಸೊ ಸರ್ವಜ್ಞ

ಘನಗುರುವೆ ನೀವಲ್ಲದೆನಗಾರು ಗತಿಯುಂಟು
ಅನುನಯದಿ ನಿಮ್ಮ ಮೊರೆಹೊಕ್ಕ ಬಳಿಕಿನ್ನು
ಜನನವೆನಗುಂಟೆ ಸರ್ವಜ್ಞ

ಮೂರು ಕಣ್ಣೀಶ್ವರನ ತೋರಿಕೊಡಬಲ್ಲ ಗುರು
ಬೇರರಿವುದೊಂದು ತೆರನಿಲ್ಲ ಗುರುಕರುಣ
ತೋರುವುದು ಹರನ ಸರ್ವಜ್ಞ

ಮತ್ತೆ ಸದ್ಗುರು ಮುಖದಿ ತತ್ವಮಸಿಯನೆ ತಿಳಿದು
ಸತ್ಯಮೆಂತೆಂದು ಅರಿದಿಪ್ಪ ಜ್ಞಾನಿ ತಾ–
ಸತ್ತು ಹುಟ್ಟುವನೆ ಸರ್ವಜ್ಞ

## ಶ್ರೀ ಶಿವ ಸ್ತುತಿ.

ತ್ರೈಲೋಕ್ಯ ಸಂಪದಾಲೇಖ್ಯ ಸಮುಲ್ಲೇಖನ ಭಿತ್ತಯೇ ।
ಸಚ್ಚಿದಾನಂದ ರೂಪಾಯ ಶಿವಾಯ ಬ್ರಹ್ಮಣೇ ನಮಃ ॥

ಯದ್ಭಾಸಾ ಭಾಸತೇ ವಿಶ್ವಂ ಯತ್ಸುಖೇನಾನುಮೋದತೇ ।
ನಮಸ್ತಸ್ಮೈ ಗುಣಾತೀತ ವಿಭವಾಯ ಪರಮಾತ್ಮನೇ ॥

ಶಾಂತಂ ಪದ್ಮಾಸನಸ್ಥಂ ಶಶಿಧರ ಮುಕುಟಂ ಪಂಚವಕ್ತ್ರಂ ತ್ರಿಣೇತ್ರಂ ।
ಶೂಲಂ ವಜ್ರಂಚ ಖಡ್ಗಂ ಪರಶುಮಭಯದಂ ದಕ್ಷಭಾಗೇವಹಂತಂ ॥
ನಾಗಂ ಪಾಶಂ ಚ- ಘಂಟಾಂ ಪ್ರಳಯಹುತವಹಂ ಸಾಂಕುಶಂ ವಾಮಭಾಗೇ ।
ನಾನಾಲಂಕಾರ ದೀಪ್ತಂ ಸ್ಫಟಿಕಮಣಿನಿಭಂ ಪಾರ್ವತೀಶಂ ನಮಾಮಿ ॥

ಹೃತ್ಪದ್ಮಂ ಶಿವಧರ್ಮಕಂದ ಸಹಿತಂ ಸುಜ್ಞಾನನಾಳಂ ತಥಾ ।
ನಿತ್ಯೈಶ್ವರ್ಯದಳಾಷ್ಟಕಂ ಶಶಿನಿಭಂ ವೈರಾಗ್ಯ ಸತ್ಕರ್ಣಿಕಂ ॥
ಶ್ರೀ ರುದ್ರೇಶ್ವರ ಕೇಸರಾನ್ವಿತಮಿದಂ ಸಂಚಿತ್ಯ ತನ್ಮಧ್ಯಮೇ
ಸೂರ್ಯೇಂದೂಜ್ವಲ ವಹ್ನಿ ಮಂಡಲಗತಂ ಧ್ಯಾಯೇ ಶಿವಂ ಚಿನ್ಮಯಂ ॥

## ಶ್ರೀ ಶಕ್ತಿ ಸ್ತುತಿ.

ಯಾಮಾಹುಸ್ಸರ್ವಲೋಕಾನಾಂ ಪ್ರಕೃತಿಂ ಶಾಸ್ತ್ರಪಾರಗಾಃ ।
ತಾಂ ಧರ್ಮಚಾರಿಣೀಂ ಶಂಭೋಃ ಪ್ರಣಮಾಮಿ ಪರಾಂ ಶಿವಂ ॥

ಶಿವಾದಾದಿ ಸಮುತ್ಪನ್ನ ಶಾಂತ್ಯತೀತ ಪರೋತ್ತರಾಂ ।
ಮಾತರಂ ತಾಂ ಸಮಸ್ತಾನಾಂ ವಂದೇ ಶಿವಕರೀಂ ಶಿವಾಂ ॥

ಅಮೃತಾರ್ಥಂ ಪ್ರಪನ್ನಾನಾಂ ಯಾ ಸುವಿದ್ಯಾ ಪ್ರದಾಯಿನೀ ।
ಅಹರ್ನಿಶಮಹಂ ವಂದೇ ತಾಮೀಶಾನಂ ಮನೋರಮಾಂ ॥

## ಶ್ರೀ ಗಣೇಶ ಸ್ತುತಿ.

ಗಜಾನನಂ ಭೂತ ಗಣಾದಿ ಸೇವಿತಂ
ಕಪಿತ್ಥ ಜಂಬೂಫಲಸಾರ ಭಕ್ಷಿತಂ ।
ಉಮಾಸುತಂ ಶೋಕ ವಿನಾಶಕಾರಣಂ
ನಮಾಮಿ ವಿಘ್ನೇಶ್ವರ ಪಾದಪಕಂಜಂ ॥

ವಕ್ರತುಂಡ ಮಹಾಕಾಯ ಕೋಟಿ ಸೂರ್ಯ ಸಮಪ್ರಭ
ಅವಿಘ್ನಂ ಕುರು ಮೇ ದೇವ ಸರ್ವಕಾರ್ಯೇಷು ಸರ್ವದಾ ॥

ಅಗಜಾನನ ಪದ್ಮಾರ್ಕಂ ಗಜಾನನಮಹರ್ನಿಶಂ ।
ಅನೇಕ ದಂ ತಂ ಭಕ್ತಾನಾಮೇಕದಂತಮುಪಾಸ್ಮಹೇ ॥

## ಶ್ರೀ ಸರಸ್ವತೀ ಸ್ತುತಿ.

ಯಾ ಕುಂದೇಂದು ತುಷಾರಹಾರಧವಲಾ ಯಾ ಶುಭ್ರ ವಸ್ತ್ರಾವೃತಾ
ಯಾ ವೀಣಾ ವರ ದಂಡಮಂಡಿತ ಕರಾ ಯಾ ಶ್ವೇತ ಪದ್ಮಾಸನಾ ।
ಯಾ ಬ್ರಹ್ಮಾಚ್ಯುತ ಶಂಕರ ಪ್ರಭೃತಿಭಿರ್ದೇವೈ ಸದಾವಂದಿತಾ
ಸಾ ಮಾಂ ಪಾತು ಸರಸ್ವತೀ ಭಗವತೀ ನಿಶ್ಶೇಷ ಜಾಡ್ಯಾಪಹಾ ॥

## ಶ್ರೀ ಲಕ್ಷ್ಮೀ ಸ್ತುತಿ.

ಜಯಂತಿ ಜಗತಾಂ ಮಾತುಃ ಸ್ತನ ಕುಂಕುಮ ಬಿಂದವಃ ।
ಮುಕುಂದಾಶ್ಲೇಷ ಸಂಕ್ರಾಂತ ಕೌಸ್ತುಭ ಶ್ರೀ ವಿಡಂಬಿನಃ ॥

ಸಹೋದರತ್ವಂ ಪ್ರತಿಪದ್ಯ ಯಸ್ಯಾಃ ಸ್ಫುರತ್ ಕಲಂಕೋಽಪಿ ಮತೋದ್ವಿಜೇಶಃ
ಸಮಸ್ತ ಸಾದೂಗುಣ್ಯ ವಿಧಾನದಕ್ಷಾ ಸದಾಶರಣ್ಯಾ ಮಮ ಸಾಸ್ತು ಲಕ್ಷ್ಮೀ॥

# ಸ್ತುತಿ ಗೀತಾವಳಿ.

## (ಅ) ಶ್ರೀ ಜಗದ್ಗುರು ಪಂಚಾಚಾರ್ಯರ ಸ್ತೋತ್ರ.

ವೀರಶೈವ ಗುರುರಾಜ ಭಜನಾ
ಮಾಡೈ ಪಂಚಾಚಾರ್ಯರ ಸ್ತವನಾ ॥ಪ॥
ವೀರಶೈವನೇ ನೀನೋ ಸುಜನಾ
ಅಹುದಾದರೆ ಮಾಡೋ ಗುರುಧ್ಯಾನಾ ॥ಅ.ಪ॥

ಸೋಮನಾಥ ಜ್ಯೋತಿರ್ಮಯ ಭವನ
ನಾಮ ಜಗದ್ಗುರು ಶ್ರೀ ರೇಣುಕನ ॥೧॥

ಉಜ್ಜಯಿನಿ ಸಿದ್ಧೇಶಾಲಯನಾ
ಮರುಳಾರಾಧ್ಯನ ಮಂಜುಳಗಾನಾ ॥೨॥

ಏಕೋರಾಮನ ಆ ಕೇದಾರ
ನಾಥೇಶನ ಪ್ರಾತಃ ಸ್ಮರಣಾ ॥೩॥

ಶ್ರೀ ಶೈಲ ಮಹಾಲಿಂಗೋದಯನಾ
ಆ ಶಿವ ಪಂಡಿತ ದೇಶಿಕ ವರನಾ ॥೪॥

ಕಾಶೀ ವಿಶ್ವೇಶ್ವರ ಲಿಂಗಜನಾ
ವಿಶ್ವಾರಾಧ್ಯನ ವಿಶ್ವಂಭರನಾ ॥೫॥

ನ ಗುರೋರಧಿಕಮೆನ್ನುವ ಶೃತಿವಚನ
ಶ್ರೀ ಗುರು ಭಕ್ತಿಯ ಮುಕ್ತಿಯ ಸೋಪಾನಾ ॥೬॥

## (ಬ) ಪಂಚಾಚಾರ್ಯರ ಭಜಿಸೊ ನಿರಂತರ.

ಪಂಚಾಚಾರ್ಯರ ಭಜಿಸೊ ನಿರಂತರ
ಪಂಚಮುಖದಿ ಸಂಜನಿಸಿದ ಮಹಿಮರ ॥ಪ॥

ಜಗದೊಳು ಜನನ ಮರಣಗಳ ಕಳೆಯುವ
ಬಗೆಯ ತಿಳಿದು ಪೂಜಿಸು ಗುರುಪದವ
ನ ಗುರೋರಧಿಕಮೆನ್ನುವ ಶೃತಿ ಮತವ
ಅಗಲದೆ ಪಿಡಿ ಬಿಡದಿರು ಗುರುಪಥವ ॥೧॥

ಗುರುಕರುಣದಿ ಪಡೆದಿರುವಿ ಲಿಂಗವ
ಗುರು ಜಂಗಮ ಲಿಂಗಗಳೊಂದೆಂಬುವ
ಗುರುದೀಕ್ಷೆಯ ಪರಮಾನು ಬೋಧವ
ಮರೆಯದೆ ಹಿಡಿ ನಿಜ ಮುಕ್ತಿ ಮಾರ್ಗವ ॥೨॥

ಪಾವನ ಪಂಚಾಚಾರ್ಯರ ಪದವ
ಆವಾಗಲು ಗುರು ಭಜನಾಮೃತವ ।
ಸೇವಿಸು ಸಂತತ ಮನವ ತಣಿಸುವ
ಶ್ರೀ ವಿಬುಧ ಶ್ರೀ ಕಂಠ ಗೀತವ ॥೩॥

## (ಕ) ಶ್ರೀ ಪಂಚಾಚಾರ್ಯರ ಭಜನೆ

ಗುರುರಾಜ ಭಜನ । ಪರಮಪಾವನ
ನಿರುತ ಗೈಯ್ದ ನರನದೆ ಪುಣ್ಯ ಜೀವವ ॥ಪ॥

ಸಾರ ಸಂಪದನ ಶ್ರೀ ರೇಣುಕನ
ಕೊಲ್ಲಿಪಾಕಿಯ ಸೋಮಲಿಂಗ ಭವನ
ಚೆಲ್ವ ಬಾಳೆಹಳ್ಳಿಯಲ್ಲಿ ಮೆರೆಯುವವನ
ನೆಲ್ಲಿಕಾಯಿ ರುಚಿಯ ನಾಮ ರೇಣುಕನ ।೧॥

ಉಜ್ಜಯಿನಿಯ ಲಿಂಗಾವತಾರನ
ಉಜ್ಜಯಿನಿ ಸದ್ಧರ್ಮ ಪೀಠದೊಡೆಯನ
ವೀರಶೈವ ಧರ್ಮೋದ್ಧಾರಿ ದಾರುಕನ ॥೨॥

ಶ್ರೀ ಗಿರಿಯ ಮಲ್ಲಿನಾಥ ಲಿಂಗಭವನ
ಶ್ರೀ ಗುರುವರೇಣ್ಯ ಪಂಡಿತ ವರನ
ಆಗಮೋಕ್ತ ಷಟ್‌ಸ್ಥಲ ಜ್ಞಾನ ಭರನ ॥೩॥

ಕಾಶೀ ವಿಶ್ವನಾಥ ಲಿಂಗೋದಯನ
ಪಾಶಹರ ಪಂಚಾಕ್ಷರ ಮಂತ್ರಮಯನ
ಭಾಸಮಾನ ವಿಶ್ವಾರಾಧ್ಯ ನಾಮಧರನ ॥೪॥

ಹಿಮಗಿರಿಯ ರಾಮನಾಥ ಲಿಂಗಜನ
ವೈರಾಗ್ಯ ದಿವ್ಯ ಪೀಠ ವಿರಾಜಿತನ
ಸಾರುಮತಿ ಶ್ರೀಕಂಠಕವಿ ಗೀತ ಪದನ ॥೫॥

## (ಡ) ಶ್ರೀ ಪಂಚಾಚಾರ್ಯರ ನುತಿಸು

ಪಂಚಾಚಾರ್ಯರ ನುತಿಸೊ ನಿರಂತರ
ಪಂಚವದನ ಪರಶಿವ ಮುಖ ಜಾತರ ॥ಪ॥

ಗುರುರೂಪದಲಿ ಧರೆಗವತರಿಸಿದ
ಪರತರ ರೇವಣ ಶ್ರೀ ಗುರು ವರರ ॥೧॥

ಮರವೆಯ ಕಳೆವ ಮೋಕ್ಷವ ಕೊಡುವ
ಮರುಳಸಿದ್ಧೇಶ್ವರ ಕರುಣಾಮಯರ ॥೨॥

ಶ್ರೀ ಗಿರಿರಾಜ ಸಿಂಹಾಸನ ರಾಜಿತ
ಆಗಮನುತ ಶ್ರೀ ಪಂಡಿತ ನಾಮರ ॥೩॥

ವಿಶ್ವೇಶ್ವರ ಶ್ರೀ ಲಿಂಗೋದ್ಭವರ
ವಿಶ್ವಮಹಿಮರ ವಿಶ್ವಾರಾಧ್ಯರ ॥೪॥

ಶೋಕ ಹರಿಸುವ ಏಕೋರಾಮರ
ಶ್ರೀ ಕಂಠ ಕವಿ ಸನ್ನುತಿ ಪ್ರೀತರ ॥೫॥

(ಮೇಲಿನ ನಾಲ್ಕು ಕವನಗಳನ್ನು ರಚಿಸಿದವರು–
ಕರ್ನಾಟಕ ಕವಿಚಂದ್ರ ಶ್ರೀ ಶ್ರೀಕಂಠ ಶಾಸ್ತ್ರಿಗಳು
ಹಿರೇಮಠ, ನಲವಡಿ)



## ಪೊರೆಯೊ ನಿರಂತರ ಗುರುವರ ರೇಣುಕ !

ಶ್ರೀ ವೃಷಭಲಿಂಗ ಕವಿ.

ಪೊರೆಯೊ ನಿರಂತರ ಗುರುವರ ರೇಣುಕ
ಸ್ಮರಿಸುವೆ ನಿನ್ನಯ ಚರಣ ಕಮಲಗಳ ||ಪ||

ಅರಿಯದೆ ಕಡುತರ ದುರಿತವನೆಸಗಿ
ಪರಿಪರಿಯಿಂದಲಿ ನರಳುವೆ ಭವದೊಳು ||೧||

ಗುರುವೆ ನಿನ್ನನು ಬಿಟ್ಟು ಪೊರೆಯುವರಾರುಂಟು ।
ಪರಮ ದಯಾಳುವೆ ಪರಶಿವ ರೂಪಿಯೆ ||೨||

ಹರಿವಿಧಿ ಮೊದಲಾದ ಸುರರಿಗೆ ಲಿಂಗವ ।
ಕರುಣಿಸಿ ಕಾಯುವ ಕರುಣಿಯು ನೀನಲಾ ||೩||

ನಿಗಮಾಗಮಗಳು ನಿನ್ನಯ ಮಹಿಮೆಯಂ ।
ಬಗೆ ಬಗೆಯಿಂದಲಿ ಪೊಗಳುತಲಿರುವವು ||೪||

ವೃಷಭ ಲಿಂಗನಿಗಭಿಲಷಿತವನೀಯುವ
ವಿಷಮನಯನ ವರವೃಷ ಪರಿಪಾಲಕ ||೫||

## ಜಗದಾಚಾರ್ಯ ಭೋ ರೇಣುಕದೇವ !

–ಶ್ರೀ ಅಮರನಾಥ ಕವಿ

ಜಗದಾಚಾರ್ಯ ಭೋ ರೇಣುಕದೇವ ।
ಮೃಗಧರರೂಪ ವಿಭೋ ಪರಿಪಾಹಿ ||ಪ||

ಪಾವನಕಾಯ, ಪಾವಕಲೋಚನ ।
ಕೋವಿದಸಂಚಯ ದೇವ ಮಹೀಜ ||೧||

ಚೋಳ ಧರೇಂದ್ರ ಪಾಲಮಹಾಯತಿ ।
ಜಾಲ ಲಲಾಮ ಸುಶೀಲ ಗಣೇಶ ||೨||

ದೇಶಿಕವರ್ಯ ಭಾಸುರಶಮಿಪುರ
ವಾಸ ಸುರೇಶ ಕವೀಶ ಸುಪೋಷ ||೩||

## ರೇಣುಕ ಗುರುರಾಜ ಜಯ !

—ಶ್ರೀ ಕಾಶಿನಾಥ ಶಾಸ್ತ್ರಿಗಳು

ರೇಣುಕ ಗುರುರಾಜ ಜಯ ।
ಸ್ಥಾಣುರೂಪ ಗುಣ ನಿಲಯ ॥
ಆಣವಾದಿ ಮಲ ವಿಲಯ
ಪ್ರಣವ ಮಯ ವಿಭೋ ॥೧॥

ಸೋಮನಾಥ ಲಿಂಗಭವ
ಸೋಮಶಾಂತ ಭಂಗಭವ ।
ಪ್ರಮಾಕಾಂತ ತುಂಗಶಿವ
ಪ್ರಮಥ ಪುಂಗವ ॥೨॥

ಕ್ಲೇಶರಾಶಿ ನಾಶಕರ ।
ದೇಶಿಕೇಶ ವರದಕರ ॥
ಕಾಶಿನಾಥ ಪಾಶಹರ
ಭಾಸ ಚರವರ ॥೩॥

## ಸುಶಾಂತ ಗುರುವರೇಣ್ಯ !

—ಶ್ರೀ ಮ.ನಿ.ಪ್ರ. ಕುಮಾರ ಶಿವಯೋಗಿಗಳು ಹಾನಗಲ್ಲ

ಸುಶಾಂತ ಗುರುವರೇಣ್ಯ
ರೇಣುಕಾರ್ಯ ಭೋ ॥ಪ॥

ವೀರಶೈವ ಮತಸಾರ
ಪರಮಾವತಾರ ।
ಗುರುದೇವ ನೀನೆ
ಪರಿಪಾಲಿಸೈ ಮತಾಚಾರ್ಯ ॥೧॥

ಕಪಟಾವಕಟ ಮೋಸ
ಚಪಲಕುದೋಷ ।
ವಿಪರೀತ ಮಾಡಿ
ಸುಪಥವೀಯೋ ಮಹಾಚಾರ್ಯ ॥೨॥

ಶಿವಯೋಗಿ ಕುಲಪಾಲ
ಭವನಾಶ ಮೂಲ ಜವದಿಂದ
ನೋಡಿ ತವೆ ಮೋದದಿ ಶಿವಾಚಾರ್ಯ ॥೩॥

## ಜಗದಾಚಾರ್ಯನ ಧ್ಯಾನಿಸು.

—ಶ್ರೀ ಹರೀಶ್ವರ ಶಾಸ್ತ್ರಿಗಳು

ಜಗದಾಚಾರ್ಯನ
ಧ್ಯಾನಿಸು ಮನದೊಳು ॥ಪ॥

ಜಗದಾಚಾರ್ಯನ
ಜಗದೇಕ ದೇವನ
ನಿಗಮಗೋಚರನ ಧ್ಯಾನಿಸು ॥೧॥

ಪರಶಿವ ಲಿಂಗದೊ-
ಳುದಿಸಿದ ಮಹಿಮನ
ಪರಶಿವ ರೂಪನ ಧ್ಯಾನಿಸು ॥೨॥

ಪರಶಿವ ಮತವನು
ಸಲೆನೆಲೆಗೊಳಿಸಿದ
ಗುರು ಚಕ್ರೇಶನ ಧ್ಯಾನಿಸು ॥೩॥

ತರುಣ ಹರೀಶನ
ಹೃದಯ ನಿವಾಸನ
ಗುರುವರ ರೇಣುಕನ ಧ್ಯಾನಿಸು ॥೪॥

## ಗುರುದೇವ ಪೊರೆ ದಾರುಕಾಚಾರ್ಯ

—ಶ್ರೀ ಹೋಟಗಿ ಪಟ್ಟಾಧ್ಯಕ್ಷರು

ಗುರುದೇವಾ ಪೊರೆ
ದಾರುಕಾಚಾರ್ಯ ವಿಭೋ ॥ಪ॥

ಕಡುತರ ಭವವೆಂಬ
ಕಡಲದ ವಡಲಿನ
ಮಡವಿನೊಳ್ಮುಳುಗಿ ಕಷ್ಟ
ಪಡುವೆನು ಮೃಡತನಯ ॥೧॥

ಪೊಡವಿಪ ಗುರುರಾಯ
ಮೂಢನು ನಾ ನಿಮ್ಮ
ಅಡಿಗಳ ಪಿಡಿದು
ಅಡಿಗಡಿಗೆ ಬೇಡಿಕೊಳ್ಳುವೆ ॥೨॥

ಋಷಿವರ ದಧೀಚಿಗೆ
ಈಶನ ತತ್ತ್ವವಂ
ಲೇಸಾಗಿ ಬೋಧಿಪ
ದಾಸ ಹೋಟಗೀಶ ಪಾಲ ॥೩॥



## ಶ್ರೀ ದಾರುಕಾರ್ಯ ಗುರುನಾಯಕ !

—ಶ್ರೀ ಹರೀಶ್ವರ ಶಾಸ್ತ್ರಿಗಳು

ಶ್ರೀ ದಾರುಕಾರ್ಯ ಗುರುನಾಯಕ ।
ಪರಮಾತ್ಮ ತತ್ತ್ವ ಪ್ರಕಾಶಕ ॥ಪ॥

ವೇದ ವಿಚಾರಕ ಸಾಧು ಜನೋತ್ಸುಕ
ಸಾಧಕ ಸದ್ಗತಿದಾಯಕ
ಬಾಧಕ ವಿಷಯ ಸಂಶೋಧಕ ಬೋಧಕ
ಭೂ ಧವ ಪಾಲಕ ಶ್ರೀಧವ ತಿಲಕ ॥೧॥

ವಿಬುಧ ವಿಭಾಸಕ ವಿಬುಧ ವಿಲಾಸಕ
ವಿಬುಧ ಹರೀಶ್ವರ ಪೋಷಕ ।
ಶುಭತರ ಕೀಲಕ ವೈಭವ ಕಾರಕ
ಭೋ ಭವ ನಾಶಕ ಪಾಹಿ ವಿಶೋಕ ॥೨॥

## ಸದ್ಗುರುನಾಯಕ ಏಕೋರಾಮ

—ಶ್ರೀ ಕಾಶೀನಾಥ ಶಾಸ್ತ್ರಿಗಳು

ಸದ್ಗುರು ನಾಯಕ ಏಕೋರಾಮ । ಸದ್ಗತಿದಾಯಕ ಏಕೋರಾಮ
ಸದ್ಗುಣಪಾಲಕ ಏಕೋರಾಮ । ಚಿದ್ಗತಿಚಾಲಕ ಏಕೋರಾಮ ॥೧॥

ದೀಕ್ಷಾಚಾರ್ಯ ಏಕೋರಾಮ । ಶಿಕ್ಷಾಚಾರ್ಯ ಏಕೋರಾಮ
ಮೋಕ್ಷಾಚಾರ್ಯ ಏಕೋರಾಮ । ರಕ್ಷಾಚಾರ್ಯ ಏಕೋರಾಮ ॥೨॥

ಪರಶಿವ ಪುತ್ರ ಏಕೋರಾಮ । ಗುರುಕುಲ ಸತ್ರ ಏಕೋರಾಮ
ಹರಗಣ ಮಿತ್ರ ಏಕೋರಾಮ । ಸುರವನ ಚೈತ್ರ ಏಕೋರಾಮ ॥೩॥

ಯತಿಪತಿ ಶರಣ ಏಕೋರಾಮ । ರತಿಪತಿ ಹರಣ ಏಕೋರಾಮ
ಶ್ರುತಿನುತ ಚರಣ ಏಕೋರಾಮ । ನುತಿನತ ಭರಣ ಏಕೋರಾಮ ॥೪॥

ಶಿವಮತ ಪಕ್ಷ ಏಕೋರಾಮ । ಭವವೃತ ಮೋಕ್ಷ ಏಕೋರಾಮ
ಶಿವವಿಷಮಾಕ್ಷ ಏಕೋರಾಮ । ಕವಿನುತ ರಕ್ಷ ಏಕೋರಾಮ ॥೫॥

# ಶ್ರೀ ಏಕೋರಾಮರ ಭಜನೆ !

—ಶ್ರೀ ಸಂಗಮೇಶ್ವರ ಪಟ್ಟಾಧ್ಯಕ್ಷರು

ಮಾಡೋ ಏಕೋರಾಮ ಗುರುವಿನ ಭಜನೆ ।
ಕೂಡಿ ತ್ರಿವಿಧಕರಣದಿಂದಲಿ ನರನೇ ॥ಪ॥

ನೆನೆದು ನೆನೆದು ನೆನಹು ಬಲಿದು
ಮಣಿದು ಹೊಡೆ ಚಪ್ಪಳಿ ನಲಿದು
ಮನದೊಳಿಹ ದುರ್ಗುಣವನಳಿದು
ವಿನಯದಿ ಕೀರ್ತಿಸು ನೀ ಕುಣಿದು ॥೧॥

ಸಾರ ಸುಗುಣಾಗಾರ ಶಿವನ
ಘೋರಮುಖ ಸಂಜಾತನ
ಭೂರಿಕರುಣಾ ವಾರಿಧಿಯನು
ಕೋರಿ ಬಾಯ್ದೆರೆ ಸಂಪನ್ನಾ ॥೨॥

ವೃತ್ಯು ಕುಜವಕಿತ್ತು ಸುಖವ–
ನಿತ್ತು ಸಂಗಮದೇವ.
ನೆತ್ತಿ ಪೊರೆವಗಿತ್ತು ಮನವ
ನಿತ್ಯದಿ ಪಾಡೆಲೊ ಮಾನವಾ ॥೩॥



## ಪಾದ ಪೂಜೆಯ ಮಾಡುವೆ !

—ಶ್ರೀ ಗಂಗಾಧರ ಶಿವಾಚಾರ್ಯರು ಮರಬ

ಪಾದ ಪೂಜೆಯ ಮಾಡುವೆ
ಸದ್ಗುರುವಿನ ಪಾದಪೂಜೆಯ ಮಾಡುವೆ ॥ಪ॥

ವಾದ ಖೇದಗಳಳಿದು
ಮೋದದಿ ನಲಿಯುವ
ಭೇದ ರಹಿತ ಶಿವಸಾಧು ಜಂಗಮರ ॥ಅ.ಪ॥

ಅಷ್ಟಾವರಣಂಗಳನು ಸೃಷ್ಟಿಸಿ ಜನರ
ಕಷ್ಟವ ಪರಿಹರಿಸಿ ಇಷ್ಟಫಲಂಗಳ
ನಿಷ್ಠೆಯಿಂ ಕೊಡುತಿಹ ಶ್ರೇಷ್ಠ ಸದ್ಗುಣ ಮಣಿ
ರೇಣುಕಾಚಾರ್ಯರ ಪಾದಪೂಜೆಯ ಮಾಡುವೆ ॥೧॥

ಏರಿ ಬರುತಲಿಹ ಸಂಸಾರದ ನೆಲೆಯ
ತೂರುತಲನುದಿನದಿ ಸಾರಭಕ್ತಜನಕೆ
ಪರಶಿವನತ್ತ್ವವ ಭರದಿ ಬೋಧಿಸಿ ಕಾಯ್ದ
ದಾರುಕಾಚಾರ್ಯರ ಪಾದಪೂಜೆಯ ಮಾಡುವೆ ॥೨॥

ಏಕತಾನದಿ ನಿಲಿಸಿ ಮನವನುರೆ
ಲೋಕದಿ ಸಂಚರಿಸಿ ಶ್ರೀಕರ ಶಿವಗುಣ–
ದಾಕರೆನೆನಿಸಿದ ಲೋಕಪಾಲಕನಾದ
ಏಕೋರಾಮಾರ್ಯರ ಪಾದಪೂಜೆಯ ಮಾಡುವೆ ॥೩॥

ಚಂಡ ಸೂರ್ಯಾಸನದಿ ಮಂಡಿಸಿ ನಿಖಿಲಾ
ಜಾಂಡದಜ್ಞಾನವನು ಖಂಡಿಸಿ ಮಹಿಮೋದ್ದಂಡ-
ನೆಂದೆನಿಸಿಹ ಪಂಡಿತ ಕುಲಪತಿ
ಪಂಡಿತಾರಾಧ್ಯರ ಪಾದಪೂಜೆಯ ಮಾಡುವೆ ॥೪॥

ವಿಶ್ವದ ಜೀವಿಗಳ ಕಶ್ಮಲ ಕಳೆದು
ಈಶ್ವರ ಸಮನೆನಿಸಿ ವಿಶ್ವಾಸದೆರಗುವ
ವಿಶ್ವಮಾನವರಿಗೆ ಶಾಶ್ವತ ಸುಖವೀವ
ವಿಶ್ವಾರಾಧ್ಯಾರ್ಯರ ಪಾದಪೂಜೆಯ ಮಾಡುವೆ ॥೫॥

# ಶ್ರೀ ಗುರು ರೇವಣ !

ಶ್ರೀ ಕಾಶೀನಾಥ ಶಾಸ್ತ್ರಿಗಳು—

ಶ್ರೀ ಗುರು ರೇವಣ ಶ್ರೀ ಕಂಠ ಧಾರಣ ।
ಶ್ರೀ ಕಾಂತಕಾರಣ ಓಂ ಓಂ ಓಂ ॥ಪ॥

ಪಾಹಿ ಪಾಹಿ ಫಾಲೇಕ್ಷಣ
ದುಷ್ಟೌಘ ಶಿಕ್ಷಣ ಶಿಷ್ಟೌಘ ರಕ್ಷಣ
ಕಷ್ಟೌಘ ತಕ್ಷಣ ಓಂ ಓಂ ಓಂ ॥೧॥

ಕುಂಭ ಸಂಭವ ಪೂಜಿತ
ರಂಭಾಪುರೀ ಸ್ಥಿತ ರಂಭಾದಿಸಂಸ್ತುತ
ಸಾಂಬಾಸ್ಯ ನಿರ್ಗತ ಓಂ ಓಂ ಓಂ ॥೨॥

ವಿಶ್ವ ವಿಶ್ವ ದಯಾಕರ
ಅಶ್ವತ್ಥ ದಂಡಧರ ಶಾಶ್ವತ ಶುಭಕರ
ಈಶ್ವರ ಶಕ್ತಿಧರ ಓಂ ಓಂ ಓಂ ॥೩॥

ವೀರಗೋತ್ರಾಧಿನಾಯಕ
ವರಪ್ರದಾಯಕ ಗುರುತ್ವದಾಯಕ
ಗುರುತ್ವ ಕಾಯಕ ಓಂ ಓಂ ಓಂ ॥೪॥

ಕಾಶಿನಾಥ ಕೃಪಾಕರ
ಆಕಾಶ ಮಾರ್ಗಚರ ಲೋಕೇಶ ಶಂಕರ
ದುಷ್ಟಾ ಶ ಸಂಹರ ಓಂ ಓಂ ಓಂ ॥೫॥

## ಪಾಲಿಸೈ ಶ್ರೀ ರೇಣುಕಾರ್ಯ.

-ಶ್ರೀ ಗಂಗಾಧರ ಶಿವಾಚಾರ್ಯರು ಮರಬ

ಪಾಲಿಸೈ ಶ್ರೀ ರೇಣುಕಾರ್ಯ ಬಾಲನನುದಿನ
ಲೋಲನಾಗಿ ವಿಷಯ ಸುಖದಿ ಕಾಲಕಳೆಯುವೆ ॥ಪ॥

ಜನನ ಮರಣವೆರಡರನಿತ
ಹನನಕಳುಕಿ ನಾ ನಿಜ
ಜನನಿ ಜನಕರಡಿಗಳನುರೆ
ನೆನೆಯದಳಲುವೆ ॥೧॥

ಕೀಟ ಮೊದಲು ಮಾಡಿ ಜೀವ
ಕೋಟಿ ಜನುಮದೊಳ್ ಬೆಂದು ನಾ
ಸೂಟಿ ಇಲ್ಲದಂತನೇಕ
ಕಾಟಪೊಂದಿ ಬಳಲುವೆ ॥೨॥

ಮನುಜ ಜನುಮ ಧರಿಸಿ ಜಗದೊ-
ಳಿನಿತು ಬಳಲುವೆ ನಾ
ಮನನಗೊಳಿಸೊ ನಿಗಮವಚನ-
ವೆನೆಗೆ ಚಿನುಮಯಾತ್ಮನೆ ॥೩॥

ಅಮಿತ ಮಹಿಮ ನಿಲಯನೆನಿಸಿ
ಸಮತೆಯಿಂದಲಿ ಭುವಿ
ಶಮ ದಮಾದಿ ಗುಣಗಳೊಡೆಯ
ನಮಿತ ಜಾಹ್ನವೀಧರ ॥೪॥

## ಪಾಲಿಸೆಮ್ಮನು ಸ್ವಾಮಿ ಶಂಕರ !

ವರಕವಿ ಶ್ರೀ ಜಗದ್ಗುರು ವಾಗೀಶ ಪಂಡಿತಾರಾಧ್ಯರು

ನೀಲಕಂಠನೆ ನಿಗಮ ಚರಿತನೆ
ನಿತ್ಯ ನಿರ್ಮಲ ರೂಪನೆ
ವ್ಯಾಲಮಾಲನೆ ಫಾಲನೇತ್ರನೆ
ಪಾಲಿಸೆಮ್ಮನು ಬೇಗನೆ ॥೧॥

ಕಾಮವೈರಿಯೆ ಸೋಮಧಾರಿಯೆ
ಸ್ವಾಮಿ ಶಂಕರ ಮೂರ್ತಿಯೆ
ನೇಮದಿಂದಲಿ ನಿನ್ನ ಭಜಿಸುವೆ
ಪ್ರೇಮದಿಂದಲಿ ಪಾಲಿಸೈ ॥೨॥

ಅರಳ ಮಲ್ಲಿಗೆ ಸರವು ಕೊರಳೊಳು
ಕರದಿ ರತ್ನದ ಕಂಕಣ
ಶಿರದಿ ವಜ್ರದ ಮುಕುಟ ಧರಿಸಿದ
ಗಿರಿಜೆಯೊಡೆಯನೆ ಪಾಲಿಸೈ ॥೩॥

ಕರದಿ ಶೂಲವ ಧರಿಸಿ ಕಾಲನ-
ನಿರಿದು ಬಾಲನ ಪೊರೆದನೆ
ಹರುಷದಿಂ ವಾಗೀಶ ಕವಿಯನು
ಪೊರೆದು ವರಗಳ ಪಾಲಿಸೈ ॥೪॥

## ಶಾಂತಿ ಸುಖವ ಕೊಡು !

–ಶ್ರೀ ಕುಮಾರ ಶಿವಯೋಗಿಗಳು ಹಾನಗಲ್ಲು

ಶಾಂತಿ ಸುಖವ ಕೊಡು ಬೇಗನೇ ಶಿವ ।
ವೃಥಾಬದ್ಧಭವ ಬಾಧೆಯ । ಲಯಮಾಡುತನೀ ।
ಪರತರ ಗುರುವರ ॥ಪ॥

ಮಂದ ತಾಮಸವ । ಪೊಂದಿನಿಂದೆ ನಾನು ।
ಕುಂದು ಪಡೆಯುತ, ಸದಾ ಮೂಢತವ ॥
ಭೇದ ಮೋದವ ದವಿಸಲಹುದೆನ್ನಂ
ಭವೋತ್ತರ ! ಶಿವಾಪರ !! ಭುವೀಶ್ವರ !!! ॥೧॥

ಕುಟಿಲರಾಜಸವು । ಪಟುತರವಾಗಿಹುದು ।
ದಿಟವನರಿಯದೆ, ದೃಢಾಲಿಂಗನವ ॥
ಮಾಡಿಕೂಡಿ ಬಿಡದೆ ಕಾಡ್ವದೆನ್ನಂ ।
ಚರಾಚರ ! ಪರಾತ್ಪರ !! ನಿರಂತರ !!! ॥೨॥

ವಿಯಯ ದಾನ ತಪ । ಘನಶವೆುದವೆುಗಳನು
ಮನದ ಕೊನೆಯೊಳು, ಅನಾಧಾರನ ॥
ಧ್ಯಾನಮೌನ ಶಿವಯೋಗವ ಕೊಡು ನೀ ।
ನಮೋಭವ ! ಉಮಾಧವ !! ಸುವೇದವ !!! ॥೩॥

ಮಾರಾರಿಯೆ ಪಾಲಿಸು.

—ಶ್ರೀ ಕುಮಾರ ಶಿವಯೋಗಿಗಳು ಹಾನಗಲ್ಲು

ಮಾರಾರಿಯೆ ಪಾಲಿಸು ಕಾಲಾರಿ ಬೇಗ ।
ಪಾರುಗೊಳಿಸದೆನ್ನ ಮಾಯಾಸಂಗ ॥ಪ॥

ಮನಸಿಜನಾಗಿ ತಾ- । ಘನಬಾಧೆಗೊಳಿಸನು ।
ವನಿತೆಯರೊಲವಿತ್ತು । ವಿನಯದಿಸಾಧಿಪ ॥
ಸನುಮತದಿಂದಿಹನಾಶೆಯ ನಾಶಿಸಿ ॥೧॥

ಮರಣದ ಭೀತಿಯಿಂ । ಕೊರಗುತ್ತಿರುವೆನು ।
ಕರುಣವಿಲ್ಲದ ಯಮ । ಧೂತರಕಾಟದಿ ॥
ದುರುಳರ ಸಾಹಸ ಪರಿಹರಿಸಭವ ॥೨॥

ಆಶಾಪಾಶದಿ । ಘಾಶಿಯಾಗುವೆ ನಾನು ।
ಮೋಸದ ಮಾಯೆಯ । ಬಲೆಯೊಳು ವಾಸಿಪೆ ॥
ಭಾಸುರಾನಂದ ಶಿವಯೋಗದೊಳಿರಿಸಿ ॥೩॥

## ಗುರು ಬೇಕು ಲಿಂಗ ಬೇಕು.

-ಡಾ|| ಈ. ವೀ. ಮಲ್ಲಾಪೂರ

ಗುರುಬೇಕು ಲಿಂಗಬೇಕು
ಜಗಕೆ ಜಂಗಮ ಬೇಕೇ ಬೇಕು ||ಪ||

ವಿಭೂತಿ ಬೇಕು ರುದ್ರಾಕ್ಷಿ ಬೇಕು ।
ಮಂತ್ರ ಪಾದೋದಕ ಪ್ರಸಾದವು ಬೇಕು ||೧||

ಇಷ್ಟಲಿಂಗ ಪೂಜಿಸಿ ಕಷ್ಟಮರೆಯಬೇಕು ।
ಅಷ್ಟಾವರಣಗಳಲ್ಲಿ ನಿಷ್ಠೆ ಇಡಬೇಕು ||೨||

ಭ್ರಷ್ಟಾಚಾರ ತ್ಯಜಿಸುವ ದೃಷ್ಟಿಯಿರಬೇಕು ।
ಶ್ರೇಷ್ಠ ಗುರುವೊಬ್ಬ ಮಠಕಿರಬೇಕು ||೩||

ನಿತ್ಯದಿ ನೀತಿಯ ಮಾತನ್ನಾಡಬೇಕು ।
ಸತ್ಯಕ್ಕೆ ಸಲ್ಲುವ ಕೃತಿ ಇರಬೇಕು ||೪||

ನೀತಿಯನು ಕಲಿಸುವ ನಿಷ್ಠಾವಂತ ಬೇಕು ।
ಮತಿಯನು ಕೆಡಿಸುವ ಮತ ಬಿಡಿಸಬೇಕು ||೫||

ಹಾನಗಲ್ಲ ಕುಮಾರೇಶ್ವರ ಕೃಪೆ ಇರಬೇಕು ।
ಚಿರಂಜೀವಿ ಈಶನು ಭಜಿಸಲೇಬೇಕು ||೬||



## ಬೋಧವ ಕೊಡು ದೇವ.

-ಶ್ರೀ ತೋಂಟದಾರ್ಯರು

ಬೋಧವ ಕೊಡು ದೇವ । ಮನಕೆ ।
ಶಿವಯೋಗದ ಸುಸ್ವಾದವ ತಿಳಿಯುವ ॥ಪ॥

ಹೊನ್ನಿನ ಹೆಣ್ಣಿನ ಭ್ರಾಂತಿಯ ದೂಡಿ ।
ಜಂಗಮಾರ್ಯನ ಪಾದ ಸೇವಿಸುವ ॥೧॥

ಜ್ಞಾನ ಬಲಿದು ಭವ ಬಾಧೆಯ ನೀಗಿ
ಬೇಗ ಮೋಕ್ಷದ ಮಾರ್ಗ ಪಿಡಿಯುವ ॥೨॥

ವರ ಮಠದೀಶನೆ ತೋಂಟದಾರ್ಯ
ಬೇಗ ಅಂಗವು ಲಿಂಗದಿ ಬೆರೆವ ॥೩॥

## ಕರುಣಾಳು ಎಡೆಯೂರವಾಸ.

-ಶ್ರೀ ತಾಳಕೇರಿ ಬಸವರಾಜ

ಕರುಣಾಳು ಎಡೆಯೂರ ವಾಸಾ ಸಿದ್ಧಲಿಂಗೇಶ । ॥ಪ॥
ಪೊರೆಯೊ ಹೇ ಪರಮೇಶ ದೇವಾಧಿ ದೇವಾ

ಭವದಲ್ಲಿ ಬಂದೆ ಗತಿ ಏನು ಮುಂದೆ
ತವಸೇವೆಯೊಂದೆ ಬೇಡುವೆನು ತಂದೆ ದೇವಾಧಿದೇವಾ ॥೧॥

ಭಕ್ತಿಯ ಪಥವ ಮುಕ್ತಿಯ ನಿಲವ
ತೋರಿಸಿ ಅಭವ ಕೃಪೆಯಾಗು ದೇವಾ ದೇವಾಧಿದೇವಾ ॥೨॥

ವಿರತಿಯ ಭಾನು ಶರಣ ಸುರಧೇನು
ಪರಶಿವನೆ ನೀನು ಶರಣೆಂದೆ ನಾನು ದೇವಾಧಿದೇವಾ ॥೩॥

ಶಿವಮಂತ್ರಪ್ರಾಣ ನೀನೆ ಪ್ರಮಾಣ
ತವನಾಮ ಸ್ಮರಣ ಭವತಾಪ ಹರಣ ದೇವಾಧಿದೇವಾ ॥೪॥

ತನುಮನಧನವು ನಿನಗೆ ಅರ್ಪಣವು
ಕರುಣೆ ನಿನ್ನೊಲವು ಇರಲೆನಗೆ ಬಲವು ದೇವಾಧಿದೇವಾ ॥೫॥

ಜಗದೇಕ ಗುರುವೆ ಜಗವ ತುಂಬಿರುವೆ
ನೆನಸಿದಲ್ಲಿರುವೆ ಹೇ ಕಲ್ಪತರುವೆ ದೇವಾಧಿದೇವಾ ॥೬॥

## ಶಿವ ಎಲ್ಲೆಲ್ಲಿಯೂ ತುಂಬಿಹನು.

ಎಲ್ಲಾ ರೂಪವು ತಾನಂತೆ ಶಿವ ।
ಎಲ್ಲೆಲ್ಲಿಯೂ ತುಂಬಿಹನಂತೆ ।ಪ॥

ಅಲ್ಲಲ್ಲರಸುತ ಗುಡಿಗಳ ತಿರುಗುವ ।
ಕಳ್ಳ ಜನರಿಗೆ ಕಲ್ಲಂತೆ ಶಿವ ॥ಅ.ಪ॥

ಕಲ್ಲೆಂಬುದು ತನಗಿಲ್ಲಂತೆ ಶಿವ ।
ಕಣ್ಣಿಗೆ ಕಾಣದಿಹನಂತೆ ॥

ಕಣ್ಣನು ತೆರೆಯ ಅರಸುವ ಜನರಿಗೆ
ಬಣ್ಣ ಬಣ್ಣವಾಗಿಹನಂತೆ ಶಿವ ॥೧॥

ದೃಶ್ಯಾದೃಶ್ಯವು ತಾನಂತೆ ಶಿವ ।
ದೃಶ್ಯಾದ್ವೈತಗಳೆರಡಂತೆ ॥

ದೃಶ್ಯಾದೃಶ್ಯಗಳೆರಡರ ನಡುವೆ ।
ಶಾಶ್ವತ ರೂಪವು ತಾನಂತೆ ಶಿವ ॥೨॥

ಶಂಕರನಾದವ ತಾನಂತೆ ಶಿವ ।
ಕಿಂಕರರೊಳು ಸೇರಿಹನಂತೆ ॥

ಮಂಕನು ಮುರಿಯುವ ಕಿಂಕರರಿಗೆ ಗುರು ।
ಶಂಕರ ರೂಪವು ತಾನಂತೆ ಶಿವ ॥೩॥

## ಪರಬ್ರಹ್ಮದ ಶಿಶುವಿಗೆ ಲಾಲಿ.

–ಶ್ರೀ ಬಾಲಲೀಲಾ ಮಹಂತ ಶಿವಯೋಗಿಗಳು ಮುಳಗುಂದ

ಲಾಲಿ ಲಾಲಿಯು ಪರಬ್ರಹ್ಮದ ಶಿಶುವೆ ।
ಮಾಲೆಯ ಧರಿಸುವೆ ಮಲ್ಲಿಗೆ ಹೂವಿನ ॥ಪ॥

ಅಷ್ಟದಳದ ಕಮಲ ತೊಟ್ಟಿಲೊಳಗೆ ಮಲಗಿ ।
ಶ್ರೇಷ್ಠ ಸದ್ಗುಣ ಹಸ್ತ ಪದಗಳನಾಡುತ ॥

ನೆಟ್ಟನೆ ನಿಟಿಲ ಭ್ರೂಮಧ್ಯದ ಜ್ಯೋತಿಯ ।
ದಿಟ್ಟಿಸಿ ನೋಡುತ ಕುಲುಕುಲು ನಗುತಿಹ ॥೧॥

ಪ್ರಣವ ಘೋಷದ ನಾಗಸ್ವರವೇಣಿ ವಾಸುಕಿ ।
ಝಣಂ ಝಣಂ ಘಲ್ಗಿಜ್ಜಿ ತಾಳಮೃದಂಗ ಭೇರಿ ॥
ಢಣ ಢಣೆಂಬುವ ಘಂಟೆಚಾಗುಟಿ ನಾದವ ।
ಬಣ್ಣಿಸಲಿವ ಶಿವಸುಖಮಯಿ ಕಂದನ ॥೨॥

ಫಲಪದಗಳ ಮೀರಿ ಶಿವಪದವೆಂಬುವ ।
ಹೊಳೆವ ಮೇಲುಪ್ಪರಿಗೆ ಮೇಲೆ ಕುಳಿತು ಮಾಯಾ ॥
ಕಲಿಯುಗ ನರ್ತಕಿಯಾಟವ ನೋಡುತ ।
ನಲಿವ ಪರಶಿವ ಮಹಾಂತ ಲಿಂಗ ಶ್ರೀ ಬಾಲಕ ॥೩॥

## ಸುಖವು ಭೋಗವು ದೊರಕುವದೆಂತು.

–ಶ್ರೀ ಬಾಲಲೀಲಾ ಮಹಾಂತ ಶಿವಯೋಗಿಗಳು ಮುಳಗುಂದ

ಹರಪೂಜೆ ಗುರುಸೇವೆ ವ೦ಪುಣ್ಯವಿಲ್ಲದೆ
ಬರಿದೆ ಸುಖಭೋಗವು ದೊರಕುವದುಂಟೆ ಆತ್ಮಾ ॥ಪ॥

.. ೩ವಿದ್ದಾಗಲೆ ಭಕ್ತಿ ನೆಣವಿದ್ದಾಗಲೆ ಸೇವೆ ।
ಗುಣವಿದ್ದಾಗಲೆ ಮಾಡಿ ಮುಕ್ತಿಪಡೆಯಾತ್ಮ ॥
ಒಣ ಮಾತಾಡಿದರಿಲ್ಲ ಸಣೆಹರಿದು ಹೋಗುವುದೆ ।
ತ್ರಿಣಯನೊಲಿಸುವುದು ಬಹು ಕರಕಷ್ಟವಾತ್ಮಾ ॥೧॥

ಹಿಂದಣ ಪುಣ್ಯವನು ಇಂದು ಉಂಡುಡಬೇಕು ।
ಇಂದಿನ ಪುಣ್ಯವನು ಮುಂದುಂಡುಡಬೇಕಾತ್ಮಾ ॥
ಬಂಧನವೇಕಿದಕೇ ಇಂದುಧರನಾಣೆಯಾಗಿ ।
ಸಂದೇಹವಿಲ್ಲವು ತಿಳಿ ಕಂಡೆಯಾತ್ಮಾ ॥೨॥

ಹರಿ ಅಜ ಸುರರೆಲ್ಲ ಶರೀರ ದಂಡನೆಮಾಡಿ
ಪರಮಾತ್ಮನೊಲಿಸಿದರು ಸುಗಮವಲ್ಲೆಲೆ ಆತ್ಮ ॥
ನರ ಪಾಪಪುಣ್ಯವನು ನರರ ಸೆರಗಿಲಿ ಹಾಕಿ ।
ಗುರು ಮಹಂತ ಲಿಂಗ ತಾ ಮರೆಯಾಗಿರುತಿರುವಾ ॥೩॥

## ನಿಜವೆಂದು ತಿಳಿದು ಪೂಜಿಸು ಗುರುಚರಣ.

ನಿಜವೆಂದು ತಿಳಿದು ಪೂಜಿಸು ಗುರುಚರಣ ।
ತ್ಯಜಿಸೋ ನೀ ಮಾಯಾ ಪ್ರಪಂಚದ ಸ್ಮರಣ ॥ಪ॥

ನಿತ್ಯವಲ್ಲದ ಕಾಯಾ ನೆಚ್ಚಿರಬೇಡ
ವ್ಯರ್ಥ ಮೋಹಕೆ ಶಿಲುಕಿ ಕೆಡದಿರೊ ಮೂಢ ॥೧॥

ವನಿತೆಯರ ಮೋಹವೆಂಬುದು ದೊಡ್ಡ ಶರಧಿ ।
ಅನುಕೂಲದಿಂದಲಿ ದಾಟೊ ನೀ ಭರದಿ ॥೨॥

ಎಂದಿಗೂ ಮರಣ ತಪ್ಪದು ಕೇಳ್ ಮರುಳೆ
ಚಂದ್ರಶೇಖರನ ಪೂಜಿಸು ಹಗಲಿರುಳೆ ॥೩॥

## ಧ್ಯಾನವ ಮಾಡೊ ನಿಜಗುರು.

—ಶ್ರೀ ಘನಮಠ ನಾಗಭೂಷಣ ಶಿವಯೋಗಿಗಳು

ಧ್ಯಾನವ ಮಾಡೊ ನಿಜಗುರು ಧ್ಯಾನವ ಮಾಡೋ
ಮಾನವ ನೀನತಿ ಮತಿಯುತನೆನಿಸುತೆ ॥ಪ॥

ಜಗದೊಳಗನುದಿನ ನ ಗುರೋರಧಿಕವೆಂದು
ಪೊಗಳುವ ಶ್ರುತಿಮತವಗಲದೆ ಮುದದೊಳು ॥೧॥

ವರಕರುಣದೊಳಡಿಗೆರಗಿದವರ ಸ್ಮರ
ಹರನೆನಿಸುವ ಶರಣರ ಸುರಭೂಜನ ॥೨॥

ಮನು ಮುನಿ ಜನ ಸುರಗಣರಿಗೆ ಮೊದಲಿಗ—
ನೆನಿಸಿದನಘ ಶ್ರೀ ಘನ ಮಠೇಶನ ॥೩॥

## ನೋಡಲಾಗದೆ ದೇವ !

-ಶ್ರೀ ನಿಜಗುಣ ಶಿವಯೋಗಿಗಳು

ನೋಡಲಾಗದೆ ದೇವ ನೀ ನೋಡಲಾಗದೆ
ಕೂಡಿ ನಿನ್ನ ದಿಟ್ಟಿ ಮೂರು ನಾಡೆ ಲೇಸು ಮಾಡಲೆನ್ನ ॥ಪ॥

ಮಿಸುಕಲೀಯದೆನ್ನ ಮೋಹ
ವಿಸರವೆಂಬ ವನವನುರುಹಿ
ಭಸಿತವೆನಿಸಿ ರುದ್ರ ನಿನ್ನ
ನೊಸಲವಹ್ನಿ ನೇತ್ರದಿಂದೆ ॥೧॥

ಕಲುಷ ತಿಮಿರ ಮುಸುಕೆ ಮುಗಿದು
ನಲಿಯದೆನ್ನ ಹೃದಯ ನಳಿನ-
ವಲರೆ ದಿವ್ಯರೂಪ ನಿನ್ನ
ಬಲದ ಭಾನು ನಯನದಿಂದೆ ॥೨॥

ಕರಣ ಕುಲಚಕೋರ ತಣಿಯೆ
ಹರುಷ ಶರಧಿ ಮೀರಲೆನ್ನ
ವರದ ಶಂಭುಲಿಂಗ ವಾಮ-
ದುರು ಸುಧಾಕರಾಕ್ಷಿಯಿಂದೆ ॥೩॥

## ಎನಗೆ ಭೋಗ ಭಾಗ್ಯಬೇಡ !

-ಶ್ರೀ ಮುಪ್ಪಿನ ಷಡಕ್ಷರದೇವರು

ಎನಗೆ ಭೋಗಭಾಗ್ಯ ಬೇಡ
ಎನಗೆ ಜಪವು ತಪವು ಬೇಡ
ಎನಗೆ ನಿಮ್ಮ ತೊತ್ತು ಸೇವೆ ನಿತ್ಯವಾಗಲೈ ॥ಪ॥

ಎನ್ನ ಕಂದಿಸುತ್ತ ಬಹಳ
ಎನ್ನ ಬಾಧಿಸುತ್ತ ಬಿಡದೆ
ಎನ್ನನೊಂದು ನೆವಗಳಿಂದ ಕಾಡಿದವರಿಗೆ ।
ಎನ್ನ ಕೊಂದಡವರಿಗೆಲ್ಲ
ಎನ್ನ ಪೂಜೆ ಫಲಗಳೆಲ್ಲ
ಉನ್ನತದೊಳವರಿಗಾಗಿ ಸುಖದಿ ಬಾಳಲಿ ॥೧॥

ಹಿಂದೆ ಎನ್ನ ಬೈದವರಿಗೆ
ಮುಂದೆ ಎನ್ನ ಬೈದವರಿಗೆ
ಕುಂದದೆಲ್ಲ ಜನರ ನಡುವೆ ಬೈದಡವರಿಗೆ ।
ಇಂದುಧರನ ಕರುಣದಿಂದೆ
ಅಂದಣವನು ಏರುವಂತೆ
ಕುಂದದೊಲಿದು ಅವರಿಗೆಲ್ಲ ಭೋಗವಾಗಲಿ ॥೨॥

ಹಿಂಗದೆನ್ನ ನಿಂದಿಸಿದ ಜ-
ನಂಗಳೆಲ್ಲ ಸುಖದೊಳಿರುವ
ಹಾಂಗೆ ಶಿವನು ಅವರಿಗೆಲ್ಲ ಭಾಗ್ಯವೀಯಲಿ !
ಮಂಗಳಾತ್ಮ ಷಡಕ್ಷರಿಯ
ಲಿಂಗ ನಿನ್ನ ತೊತ್ತು ಸೇವೆ
ಸಾಂಗವಾಗಿಯೆನಗೆ ಬಿಡದೆ ನಿತ್ಯವಾಗಲಿ ॥೩॥

## ಬೇಡಿಕೊಂಬುವೆನಭವ !

—ಶ್ರೀ ಸರ್ಪಭೂಷಣ ಶಿವಯೋಗಿಗಳು

ಬೇಡಿಕೊಂಬುವೆನಭವ ನಿನ್ನಂಘ್ರಿಯನು ತಳುವ-
ಮಾಡದೀ ವರಗಳನೆ ಕರುಣಿಸೆಲೆ ದೇವಾ ||ಪ||

ಮನದೊಳಗೆ ನಿನ್ನ ಸಂಸ್ಮರಣೆಯನು ನಾಲಗೆಯ
ಕೊನೆಯಲ್ಲಿ ಪಂಚಾಕ್ಷರಿಯನೆ ನುಡಿವುದನು
ತನುವಿನೊಳು ನಿನ್ನ ಸೇವೆಯ ಮಾಳ್ಪುದನು ಕಿವಿಯೊ-
ಳನುದಿನವು ಪ್ರಣವನಾದವನೆ ಕೇಳ್ಪುದನು ||೧||

ಪರಬಿಂದು ಕಾಂತಿಗಳ ನೇತ್ರದೊಳು ನೋಳ್ಪುದನು
ಕರದೊಳಗೆ ನಿನ್ನ ಪೂಜೆಯನೆ ಮಾಳ್ಪುದನೆ
ಮರೆದಾದೊಡಿಹ ಪರಕೆಳಸದಿಹ ವಿರತಿಯನು
ಶರವಿರುವನ್ನರಿತವರ ಸಂಗವನು ||೨||

ಆವಕಾಲದೊಳು ತತ್ತ್ವಾನುಭವವನು ಕಾಣು-
ವೀ ವಿಶ್ವವೆಲ್ಲ ಪುಸಿಯೆಂಬ ಪ್ರಜ್ಞೆಯನು
ಭಾವದೊಳು ನೀನೆ ನಾನೆಂಬ ಸಂಧಾನವನು
ದೇವ ಗುರುಸಿದ್ಧನೊಳು ಈಡೆಗೆ ಮುಕ್ತಿಯನು ||೩||



## ಶಿವಲಿಂಗ ಪೂಜಿಸಯ್ಯ !

ಶಿವಲಿಂಗ ಪೂಜಿಸಯ್ಯ
ಭವರೋಗವನ್ನು ಕಳೆವ ॥ಪ॥

ಚಿರ ಸೌಖ್ಯಕ್ಕಾಗಿ ಮುದದೀ
ಗುರು ಸೇವೆಯನ್ನು ಮಾಡೀ
ಗುರುಪಾದವನ್ನು ಸ್ಮರಿಸೀ
ಗುರು ಕರುಣದಿಂದ ಪಡೆದ ॥೧॥

ಶಿವಲಿಂಗ ಪೂಜೆಯಿಂದ
ಶಿವಲಿಂಗ ಧ್ಯಾನದಿಂದ
ಶಿವಲಿಂಗ ನೋಟದಿಂದ
ಶಿವಪದವು ಸಿಗುವುದಯ್ಯ ॥೨॥

ಶಿವಲಿಂಗ ಪೂಜೆಗೈದು
ಶಿವಶರಣರೆಲ್ಲ ಧರೆಯೋಳ್
ಶಿವರೂಪದಿಂದ ಬಾಳಿ
ಶಿವಪದವ ಪಡೆದರಯ್ಯ ॥೩॥



## ಬೇಡುವೆನಭವ ನಿಮ್ಮನು !

-ಶ್ರೀ ನಿಜಗುಣ ಶಿವಯೋಗಿಗಳು

ಬೇಡುವೆನಭವ ನಿಮ್ಮನು ಭವಭವದೊಳು
ಮಾಡೆನಗೊಲಿದು ಸುಗುಣ ಸಂತತಿಯನಿಂತು ॥ಪ॥

ಎಡರಡಿಸಿದ ವೇಳೆಯೊಳು ಧೈರ್ಯವನು ಸಿರಿ-
ಪಡೆದು ಜೀವಿಸುವೆಡೆಯೊಳು ವಿನಯುವನು
ಕಡು ಜವ್ವನದೊಳು ವಿಕೃತಿದೋರದಿಹುದನು
ಪಿಡಿದ ನೇಮುವನೆಡೆವಿಡದತಿ ಛಲವನು ॥೧॥

ಅಸುವಳಿಯಲು ದೇಹಿಯೆನಲೊಲ್ಲದಘಟನು
ಪುಸಿಯನೆಲ್ಲಿಯು ನುಡಿಯದ ಸತ್ಯವಿದನು
ಮುಸಳಿಸದಿಹ ಪುಣ್ಯಮಯ ಕೀರ್ತಿಯನು ಶಾಂತ-
ರೊಸೆದಹುದೆಂದು ಬಣ್ಣಿಸುವ ವರ್ತನವನು ॥೨॥

ವಿತರಣದೊಡನೆ ಭೋಗಿಸುವರ್ಥದೊದವನು
ಹಿತವಚನವೆ ತೊಡವೆನಿಪ ದಾನವನು
ಶ್ರುತಿ ಬೋಧನೆಯೊಳುಪರತಿಯಿಲ್ಲದರಿವನು
ನುತಿವೆತ್ತು ಕೈಸಾರುತಿಹ ಮನೋರಥವನು ॥೩॥

ಕೋಪವಂಟದ ತಪವನು ಪರವಧುವಿನ
ರೂಪುಗಂಡೆಳಸದ ಕರಣ ವಿಜಯವನು
ತಾಪವಡರಿ ಕೆಡಿಸದ ಸಾರಸುಖವನು
ಕಾಪಟ್ಯವಿಲ್ಲದಾಶ್ರಮ ಧರ್ಮರತಿಯನು ॥೪॥

ಧರೆಯೊಳತ್ಯಧಿಕವೆನಿಪ ಶಾಂತಿಮತವನು
ಕರುಣ ವಿದ್ಯೆಗಳುಳ್ಳ ಗುರುಭಜನೆಯನು
ಪರತರ ಮುಕುತಿದೋರುವ ಶಾಸ್ತ್ರವನು ಕಂತು-
ಹರ ಶಂಭುಲಿಂಗ ನಿಮ್ಮಡಿಯ ಭಕ್ತಿಯನು ॥೫॥

## ಮುಕ್ತಿ ದೂರವಿಲ್ಲ !

-ಶ್ರೀ ಸರ್ಪಭೂಷಣ ಶಿವಯೋಗಿಗಳು

ದೂರವಿಲ್ಲವೋ ಮುಕ್ತಿ । ದೂರವಿಲ್ಲವೊ
ಪಾರಮಾರ್ಥ ತತ್ತ್ವಸುಖವ । ಸೂರೆಗೊಂಬ ಯತಿಗದೇನು॥ಪ॥

ಜನಿಸಿ ತೋರ್ಪ ಜಗವಿದೆಲ್ಲ । ಕನಸಿನಂತೆ ಕೆಡುವುದೆಂದು
ಮನದೊಳರಿದು ಜನಿಸಿ ಕೆಡದ । ಚಿನುಮಯಾಂಶವಿಡಿದ ಯತಿಗೆ ॥೧॥

ತೋರುವಖಿಳ ವಿಷಯಗಳ ವಿ । ಕಾರದಾಹ್ವಯಾಕೃತಿಗಳ ।
ಮೀರುತಸ್ತಿ ಭಾತಿ ಹಿತ ವಿ। ಚಾರವರಿದು ಸುಖಿಪ ಯತಿಗೆ ॥೨॥

ಮೆರೆವ ದೃಕ್ಕೆ ಬ್ರಹ್ಮ ವಿಶ್ವ । ದಿರವೆ ದೃಶ್ಯವೆಂಬುದರಿವ
ಮರೆದು ಶ್ರೀಗುರುಸಿದ್ಧನಲ್ಲಿ । ತೆರೆದು ಪೂರ್ಣನಾದ ಯತಿಗೆ ॥೩॥

## ಕಾಡಲೇಕೆ ನರರುಗಳನು !

ಶ್ರೀ ಮುಪ್ಪಿನ ಷಡಕ್ಷರದೇವರು

ಕಾಡಲೇಕೆ ನರರುಗಳನು । ಬೇಡಿ ಬಳಲಲೇಕೆ ಮನವೆ ।
ರೂಢಿಗೀಶನೆಮಗೆ ದೈವವಾಗಿ ಇರುತಿರೆ ॥ಪ॥

ಮೃಡನ ಪೂಜೆ ಮಾಡುವುದೇಕೆ । ಮಡುವಿನಗ್ಗವಣಿಗಳುಂಟು
ಅಡವಿಯಲ್ಲಿ ಕಾಡಪತ್ರಿ ಪುಷ್ಪವುಂಟಲೈ
ಒಡಲಿಗನ್ನ ತಿರಿದರುಂಟು । ಗುಡಿಗಳುಂಟು ಶಯನಕೆಮಗೆ
ಒಡೆಯರುಗಳು ಬಿಸುಟಿದರವೆ ಶೀತಕುಂಟಲೈ ॥೧॥

ಬುದ್ಧಿಯನ್ನು ಹೇಳುವುದಕೆ । ಆದ್ಯರುಗಳ ವಚನವುಂಟು
ಉದ್ಧರಿಸುವಡೆಮಗೆ ಶಿವನ ಮಂತ್ರವುಂಟಲೈ
ಅರ್ಧನಾರಿಯೆಂಬ ದೈವ । ಇದ್ದ ಬಳಿಕ ಕರದೊಳೆಮಗೆ
ಹೊದ್ದಲೇಕೆ ನರರ ಆಶೆ ಮಾಡೆನಕ್ಕಟಾ ॥೨॥

ಮಿಗಿಲು ಮನೆಗಳೇತಕೆಮಗೆ । ಅಗಲಲೇಕನುಭಾವಿಗಳನು
ಜಗದೊಳೆಮಗೆ ಹಲವು ಕೋಟಲೆಗಳು ಏತಕ್ಕೆ
ಸೊಗಸು ಷಡಕ್ಷರಿಯಲಿಂಗ । ಆಗಲದೆಮ್ಮ ಕರದೊಳಿರಲು
ಬೆಗಡುಗೊಳ್ಳಲೇಕೆ ಮನವೆ ನರರ ಮಾಳ್ಕೆಯಿಂ ॥೩॥

## ದೇವ ದೇವ ಪಾಲಿಸಯ್ಯ !

—ಶ್ರೀ ಘನಮಠ ನಾಗಭೂಷಣ ಶಿವಯೋಗಿಗಳು

ದೇವ ದೇವ ಪಾಲಿಸಯ್ಯ ಪಾವನಾಕಾರ
ಪಾವನಾಕಾರ ಪಾವನಾಕಾರ ॥ಪ॥

ತಾರಹಾರಹೀರ ಘನಸಾರ ಸಶರೀರ ಸುಖ-
ಸಾರ ವೀ ಭಕ್ತ ಪರಿಪೂರ ಮಾರಹರ ಧೀರ ॥೧॥

ಕಾಲಕಾಲ ವ್ಯಾಲಮಾಲಶೀಲ ಗಾನಲೋಲ ಮುನಿ
ಜಾಲಪಾಲ ಮಾಯಾಕೋಲಾಹಲ ಬಾಲಶಶಿಧರ ॥೨॥

ಶೇಷಭೂಷ ದೋಷನಾಶ ಶ್ರೀಶಧೀಶ ತೋಷಮುಕ್ತಿ-
ಕೋಶ ಪರಮೇಶ ವ್ಯೋಮಕೇಶ ಘನಮಠೇಶ ಈಶ ॥೩॥

## ಕಾಯೋ ಹರಾ !

ಶ್ರೀ ಕಡಕೋಳ ಮಡಿವಾಳಪ್ಪನವರು

ಸಾಂಬಸದಾಶಿವ ಕಾಯೊ ಹರಾ ॥ಪ॥

ಹಲವು ಜನ್ಮದಿ ನಿನ್ನ ಹೊಲಬುದಪ್ಪಿದೆ ನಾ ।
ಒಲಿದು ಈ ಭವಗೆಲಿಸಯ್ಯಾ ಹರಾ ॥೧॥

ಕಕುಲತಿಗೆ ಮನಸಿಕ್ಕಿ ಬಳಲಿದೆ ನಾ ।
ದುಃಖ ಪಡುವದೇನಯ್ಯೊ ಹರಾ ॥೨॥

ಮೃಡ ಮಹಾಂತೇಶ ಹಡೆದ ಕುವರ
ಬಿಡದಿರು ಹಿಡಿ ಬೇಗ ಕೈಯ ಹರಾ ॥೩॥

## ಕರುಣಿಸೆನಗಿದನೆ ಬೇಡುವೆನು.

—ಶ್ರೀ ನಿಜಗುಣ ಶಿವಯೋಗಿಗಳು

ಕರುಣಿಸೆನಗಿದನೆ ಬೇಡುವೆನಭವ ಬೇರೊಂದು
ವರವನೊಲ್ಲೆನು ಮುಕ್ತಿ ದೊರೆವ ಸಾಧನವ ‖ಪ‖

ಆವ ಕಾಲದೊಳು ಬಳಿಕಾವ ದೇಶದೊಳು ಬೇ-
ರಾವ ವಸ್ತುವಿನೊಳಿಡವರಿಯದತಿ ಮಮತೆ
ಆವ ಪರಿಯೊಳು ತನ್ನ ಮೇಲಿರ್ಪುದಂತೆ ಗುರು-
ದೇವತೆಯೊಳನುರಾಗವಿಹುದೆ ನಿಜಭಕ್ತಿ ‖೧‖

ಅದಿದೆನ್ನದಖಿಳ ತತ್ತ್ವವನೇತಿಗಳೆದುಳಿದ
ಸದಮಳ ಚಿದಾನಂದ ಪೂರ್ಣವಾನೆಂದು
ಹೃದಯದೊಳು ನಂಬಿ ಬಹುಮತವನೆಣಿಸದೆ ಮತ್ತೆ
ಪದುಳದಿಂದಿರಲದೇ ಸಹಜ ಸುಜ್ಞಾನ ‖೨‖

ಅರಿದು ವನಿತಾದಿ ವಿಷಯದೊಳುಳ್ಳ ದೋಷವನು
ತೊರೆದವನು ಮರಳಿ ಮೋಹಿಸದೆ ಛಲಿಯಾಗಿ
ಕೊರತೆಯಿಲ್ಲದ ಶಂಭುಲಿಂಗದಂತಿರೆ ಭೋಗ-
ದೆರಕವಿಲ್ಲದುದೀಗ ಪರಮ ವೈರಾಗ್ಯ ‖೩‖

## ಹರಪೂಜೆ ಗುರುಸೇವೆ.

—ಶ್ರೀ ಬಾಲಲೀಲಾ ಮಹಾಂತ ಶಿವಯೋಗಿಗಳು

ಹರಪೂಜೆ ಗುರುಸೇವೆ ವರಪುಣ್ಯವಿಲ್ಲದೆ
ಬರಿದೆ ಸುಖಭೋಗವು ದೊರಕುವುದುಂಟೆ ಆತ್ಮಾ ‖ಪ‖

ಹಣವಿರ್ದಾಗಲೆ ಭಕ್ತಿ ನೆಣವಿರ್ದಾಗಲೆ ಸೇವೆ
ಗುಣವಿರ್ದಾಗಲೆ ಮಾಡಿ ಮುಕ್ತಿ ಪಡೆಯಾತ್ಮಾ
ಒಣಮಾತಾಡಿದರೆಲ್ಲ ಸಣೆ ಹರಿದು ಹೋಗುವದೆ
ತ್ರಿಣಯನೊಲಿಸುವುದು ಬಹುಕಠಿಣವಾತ್ಮಾ ‖೧‖

ಹಿಂದಿನ ಪುಣ್ಯವನು ಇಂದುಂಡು ಉಡಬೇಕು
ಇಂದಿನ ಪುಣ್ಯವನು ಮುಂದುಂಡುಡಬೇಕಾತ್ಮಾ
ಬಂಧನವೇಕಿದಕೆ ಇಂದುಧರನಾಣೆಯಾಗಿ
ಸಂದೇಹವಿಲ್ಲವು ತಿಳಿ ಕಂಡೆಯಾತ್ಮಾ ||೨||

ಹರಿ ಅಜ ಸುರರೆಲ್ಲ ಶರೀರ ದಂಡನೆ ಮಾಡಿ
ಪರಮಾತ್ಮನನೊಲಿಸಿದರು ಸುಗಮುವಲ್ಲೆಲೆ ಆತ್ಮ
ನರ ಪಾಪ ಪುಣ್ಯವನು ನರರ ಸೆರಗಿಲಿ ಹಾಕಿ
ಗುರು ಮಹಂತಲಿಂಗ ತಾ ಮರೆಯಾಗಿರುತಿರುವಾ ||೩||

## ಪೊರೆ ಶ್ರೀ ಪಂಡಿತಾಚಾರ್ಯ !

—ಶ್ರೀ ವೃಷಭಲಿಂಗ ಕವಿ

ಪೊರೆ ಪರಮ ಗುರುವರ್ಯ
ಶ್ರೀ ಪಂಡಿತಾಚಾರ್ಯ ||ಪ||

ಗುರುದಯೆಯಿಲ್ಲದವಂಗೆ
ಹರದಯೆಯು ದೊರಕೊಳದೆಂ—
ದೊರೆವ ಶ್ರುತಿವಾಕ್ಯಂಗ-
ಳರಿದು ಮೊರೆ ಹೊಕ್ಕಿರುವೆ ||೧||

ಶಿವಲಿಂಗ ಧಾರಣವೆ
ತವೆ ಮೋಕ್ಷ ಕಾರಣವೆಂ-
ದವನಿಯೊಳು ಶ್ರೀ ವೀರ
ಶೈವವನು ಸ್ಥಾಪಿಸಿದಿರೈ ||೨||

ಗುರುವೆ ವೃಷಲಿಂಗಾನತ
ಚರಣ ಕಮಲನೆಯನ್ನ
ದುರಿತಂಗಳನು ಕಳೆದು
ಕರುಣಿಸೈ ಅಭಿಮತವ ||೩||

## ದೇವ ದೇವ ವಿಶ್ವಾರಾಧ್ಯ !

—ಮರಬದ ಶ್ರೀ ಗಂಗಾಧರ ಶಿವಾಚಾರ್ಯರು ಗುಡೂರು

ದೇವ ದೇವ ವಿಶ್ವಾರಾಧ್ಯ ಗುರುವೆ ಪಾಲಿಸೋ ।
ಕಾವ ಜಗದ ಜನರ ವಿಮಲಭಾವದಿಂದಲಿ ॥ಪ॥

ಸಾರ ಕಾಶಿಕಾಪುರೀಶ ವಿಶ್ವನಾಥನೊಳ್
ಧೀರತನದಲಿವತರಿಸಿದ ಚಾರುಶೀಲನೆ ॥೧॥

ಕ್ರೂರ ಜನರ ಕಾರುಕೃತಿಯ ಸೂರೆಮಾಡುತ
ಸಾರಭಕ್ತ ಜನಕೆ ಸುಖವ ಮೀರಿ ಕೊಡುತಿಹ ॥೨॥

ವೀರಶೈವ ಮತವ ನಿಲಿಸಿ ಧರಣಿ ತಲದೊಳು
ವಿರತಿವನಿತೆಯರಸನಾಗಿ ಮೆರೆದೆ ಭುವನದಿ ॥೩॥

ಸ್ಥಲಗಳಾರು ಬಲದಿ ಬೋಧಿಸುತ್ತ ಜನರಿಗೆ
ಲಲಿತ ಲೀಲೆಗಳನು ತೋರಿ ಸಲಹಿದಾತನೆ ॥೪॥

ಜ್ಞಾನಪೀಠದಲ್ಲಿ ಅಮಿತ ಮಾನಪೊಂದುತ
ಸ್ವಾನುಭವ ಸುಧಾಂಬುಧಿಯೊಳು ಲೀನನಾಗಿಹ ॥೫॥

## ಪಂಚಾಚಾರ್ಯರ ಭಜಿಸು !

—ಶ್ರೀ ಸಿದ್ಧೇಶ್ವರ ಕವಿ

ಪಂಚಾಚಾರ್ಯರ ಭಜಿಸೋ ಹೇ ಮನುಜ ।
ವಾಂಛಿತ ಫಲಗಳು ಸಿಗುವವು ಸಹಜ ॥ಪ॥

ಹರಿವಿಧಿಸುರರಿಗೆ ಪರತರಲಿಂಗವ
ಕರದಿಕೊಟ್ಟು ವರಮುಕ್ತಿಯ ತೋರಿದ ॥೧॥

ಸೋಮೇಶ, ಸಿದ್ಧೇಶ, ರಾಮೇಶ ವಿಶ್ವೇಶ
ಶ್ರೀ ಮಲ್ಲಿಕಾರ್ಜುನ ಲಿಂಗಗಳಿಂ ತೋರ್ದ ॥೨॥

ಕುಂಭಜ ಗೌತಮ ಮೊದಲಾದ ಮುನಿಗಳ್ಗೆ
ಸಾಂಬತತ್ತ್ವವನೊರೆದು ಪ್ರೇಮದಿಂದಲಿ ಪೊರೆದ ॥೩॥

ಷಡ್ವಿಧಿ ವೃಷ್ಟಿ ಲಂಬನ ಮುಕ್ತಾಗುಚ್ಛ
ಪಂಚವರ್ಣ ಸೂತ್ರಂಗಳನು ರಚಿಸಿ ಮೆರೆದ ॥೪॥

ಬ್ರಹ್ಮಚಾರಿ ಮುಖ್ಯ ಚತುರಾಶ್ರಮಂಗಳ್ಗೆ
ಬ್ರಹ್ಮ ತತ್ತ್ವವ ಬೀರಿ ಬ್ರಹ್ಮನಲ್ಲಿ ಬೆರೆದ ॥೫॥

## ಪಂಚಾಚಾರ್ಯರ ಧ್ಯಾನವ ಮಾಡು !

—ಶ್ರೀ ಸಂಗಮೇಶ್ವ ಪಟ್ಟದ ಸ್ವಾಮಿಗಳು

ಪಂಚಾಚಾರ್ಯರ ಧ್ಯಾನವ ಮಾಡೋ ।
ಸಂಚಿತ ಕರ್ಮದ ತೊಡಕನು ದೂಡೋ ॥ಪ॥

ನಿಗಮಾಗಮಗಳು ಪೊಗಳುತಲಿರುವವು
ನ ಗುರೋರಧಿಕವೆಂದು ನುತಿಸಿದನರಿದು ॥೧॥

ಮೋಸದ ವಿಷಯ ವಿಲಾಸದಿ ಭ್ರಮಿಸಿ
ಕ್ಲೇಶಪೊಂದುವೆಯೇಕೆ ಮನುಜನೆ ಜೋಕೆ ॥೨॥

ಹರ ಮನುರೂಪಿನ ಗುರುಗಳ ಧ್ಯಾನದಿ
ನಿರುತದಿ ಮಾನವ ನಿಲಿಸೆಲೋ ಮನವ ॥೩॥

ಮರ್ತ್ಯದಿ ಪೂರ್ವಗುರೂತ್ತಮರಲ್ಲದೇ
ಕರ್ತೃಗಳಾರುಂಟು ಕನಸಿನ ಗಂಟು ॥೪॥

ಸಂಗಮಾರ್ಯ ಹೃದಯಂಗಮ ಕೃತಿಯೊಳು
ಕಂಗೊಳಿಸುವದನ್ನು ಭಜಿಸೆಲೋ ಮನುಜ ॥೫॥

## ಗುರುವೆ ನೀ ಕರುಣಿಸು !

–ಶ್ರೀ ಘನಮಠ ನಾಗಭೂಷಣ ಶಿವಯೋಗಿಗಳು

ಗುರುವೇ ನೀ ಕರುಣಿಸೋ ಬೇಗ ||ಪ||

ಪರಮ ಪಾವನ ನಿಮ್ಮ ಉರುಭಕ್ತಿ ಜ್ಞಾನಸ-
ದ್ವಿರತಿ ಸಂಪದವೆನ್ನ ದೊರೆಯೇ ನೀ ಕರುಣಿಸೊ ||೧||

ಅನುಮಾನವಳಿದೆನ್ನ ತನುಮನಧನವ ನಿಮ್ಮ-
ದೆನಿಸಿ ಪರಮ ಸುಖ ವನಧಿಯೊಳಿಹುದನೆ ||೨||

ಘನಮಠ ವಾಸ್ತನೆನ್ನನು ಪರಿಕಿಸದೆ ಸ-
ಜ್ಜನ ಶರಣರ ಸಂಗವನು ದಿನ ದಯದಿ ನೀ ಕರುಣಿಸೋ ||೩||

## ಶ್ರೀಗುರು ವಚನೋಪದೇಶವನಾಲಿಸು.

-ಶ್ರೀ ನಿಜಗುಣ ಶಿವಯೋಗಿಗಳು

ಶ್ರೀ ಗುರು ವಚನೋಪದೇಶವನಾಲಿಸಿ-
ದಾಗಳಹುದು ನರರಿಗೆ ಮುಕುತಿ ||ಪ||

ದುರಿತ ಕರ್ಮವನೊಲ್ಲದಿರು ಪುಣ್ಯವನೆ ಮಾಡು
ಹರನಡಿವಿಡಿ ಶಾಂತರೊಡನಾಡು
ಕರುಣವಿರಲಿ ಜೀವರೊಳು ನೀತಿವಿದನಾಗು
ಪೊರೆ ಪೊರ್ದಿದರನೆಂದು ಬೆಸಸುವ ||೧||

ನಿಂದಿಸಿ ನುಡಿಯದಿರಾರನು ಮನಸಿಗೆ
ಬಂದಂತೆ ನಡೆಯದಿರಿಹದಲ್ಲಿ
ಕುಂದುವಡೆಯದಿರು ಕಾಮಾದಿಗಳನು ಜಯಿ-
ಸೆಂದು ಕೈವಿಡಿದನುಗ್ರಹಿಸುವ ||೨||

ಭವಮಾಲೆಗಲಸು ಪುಸಿಯದಿರೆಡರು ಬಂದು
ಕವಿಯಲಂಜದಿರು ಸಂಪದದೊಳು
ತವೆ ಮದವಳಿದಿರು ತತ್ತ್ವಸಂತತಿಯನು
ನೋಡೆಂದರುಪುವ ವಿವರಿಸಿ ॥೩॥

ಬಳಸದಿರದ್ವೈತವನು ಬಾಹ್ಯದಲಿ ನಿ-
ನ್ನೊಳಗೇಕೋ ಭಾವನೆಯೊಡಗೂಡು
ತಿಳಿದು ಸಮಯನಿಷ್ಠೆಗಲಿ ವೇದವಿದಭಕ್ತಿ-
ಗಳನಗಲದಿರೆಂದುಸುರುವ ॥೪॥

ಆರು ನಾನೆಂದು ವಿಚಾರಿಸು ವಿಷಮ ಸಂ-
ಸಾರವಿದನು ಕನಸೆಂದರಿ
ಮಾರಮರ್ದನ ಶಂಭುಲಿಂಗವನೊಲಿಸಿ ಗಂ-
ಭೀರ ಸುಖದಿರೆಂದರುಪುವ ॥೫॥



## ಅವನ ಹೊರ್ತು ಮತ್ತ್ಯಾರಿಲ್ಲ !

–ಶ್ರೀ ಕಡಕೋಳ ಮಡಿವಾಳೇಶ್ವರರು

ಹರಹರ ಹರಹರ ಅನುವಲ್ಲಿ । ನೀ
ಗುರುವಿನ ಪಾದ ಹಿಡಿವಲ್ಲಿ
ಹೇಳಿದ ಮಾತೊಂದು ಕೇಳವಲ್ಲಿ । ನಿನ್ನ
ಹೀನಗುಣದ ಬುದ್ಧಿ ಬಿಡವಲ್ಲಿ ॥ಪ॥

ಹಸ್ತಬಂದ ಜಂಗಮಯೋಗಿ । ನೀ
ಕುಸ್ತಿಕಾಳಗ ಮಾಡಿದಿ ಕಾಗಿ ।
ಮುಂದಿನ ಮನಿಗೋಗಂದಿ ಸಾಗಿ । ನಿನಗ
ಮುಕ್ತಿ ಹ್ಯಾಂಗ ದೊರೆಯುವುದು ಗೂಗಿ ॥೧॥

ಹಿರಿಯರು ಗಳಿಸಿದ ಪುಣ್ಯದ ರೊಕ್ಕ । ಬೆಳ್ಳ
ಬೆಳತನಕ ಮಾಡಿಟ್ಟರಿ ಲೆಕ್ಕ
ಕೊಳ್ಳಿ ತಗೊಂಡು ಕಳ್ಳ ಮನಿ ಹೊಕ್ಕು । ನೀ
ನರಳುದು ಕಂಡು ಶಿವ ತಾನಕ್ಕ ॥೨॥

ಬರುವಾಗ ಏನೂ ತಂದಿಲ್ಲಾ । ನೀ
ಹೋಗಾಗೇನೂ ಒಯ್ಯೋಣಿಲ್ಲಾ ।
ಕರ್ತಗುರು ಮಹಾಂತೇಶನೆ ಬಲ್ಲಾ । ಎಲ್ಲಾ
ಅವನ ಹೊರ್ತು ಮತ್ತ್ಯಾರಿಲ್ಲಾ ॥೩॥



## ತಪವನು ಮಾಡಲಿಲ್ಲವೆ !

–ಶ್ರೀ ನಿಜಗುಣ ಶಿವಯೋಗಿಗಳು

ಮಾಡಲಿಲ್ಲವೇ ತಪವನು ಮಾಡಲಿಲ್ಲವೆ
ಕೂಡಿ ಸುಗುಣದೊಡನೆ ತಿಳಿದು । ನೋಡಿ ತ್ರಿವಿಧಕರಣದಲ್ಲಿ ॥ಪ॥

ಗುರುಭಜನೆ ಸುಕರ್ಮವೃತ್ತಿ । ಹರನಪೂಜೆ ಶರಣಸೇವೆ
ಪರಮಸಾತ್ವಿಕಂಗಳೆಂಟು ನೆರೆದು ನೆಲಿಸಿ ತನುವಿನಲ್ಲಿ ॥೧॥

ವಿನಯವನ್ಯ ಹಿತವ ತರ್ಕ । ವನಪಶಬ್ದ ವಿಚಲಿತಾರ್ಥ-
ವನಘಮಂತ್ರವಾಗಮಂಗಳನಿತು ವಿಡಿದು ವಚನದಲ್ಲಿ ॥೨॥

ಶಮೆ ವಿವೇಕಾತ್ಮ ವಿದ್ಯೆ । ದಯೆ ದಯಾ ವಿರಕ್ತಿ ಯೋಗ-
ವಮಳ ರೂಪ ಶಂಭುಲಿಂಗವರ್ಮ ತೋರಿ ಸುಮನದಲ್ಲಿ ॥೩॥



## ಜಗದೊಳು ಮೂಕನಾಗಿರಬೇಕು.

--ಶ್ರೀ ಶಿಶುನಾಳ ಶರೀಫಸಾಹೇಬರು

ಮೂಕನಾಗಿರಬೇಕೋ—ಜಗದೊಳು-
ಜೋಕ್ಯಾಗಿರಬೇಕೋ ||ಪ||

ಕಾಕು ಕುಹಕರ ಸಂಘವನೂಕಿರಬೇಕೊ
ಲೋಕಪತಿಯೊಳಗೇಕಾಗಿರಬೇಕೊ ||ಅಪ||

ಕಚ್ಚುವನಾಯಿಯಂತೆ ಬೊಗಳ್ವರ ಹುಚ್ಚರಂತೆ ಇಹರಾ
ಎಚ್ಚರಿಲ್ಲದವರ ತುಚ್ಛರ ನಾಚಿಕೆ ತೊರೆದವರ
ಮುಚ್ಚಿದ ಸುದ್ದಿಯ ಬಚ್ಚಿಡದಂಥಾ
ಕುತ್ಸಿತರೊಡನೆ ಮಾತನಾಡದೆ ಸದಾ ||೧||

ಕುಹಕವನುಡಿಯುವರ ಅಹಂ ಅಹ ಕುಹಕಬುದ್ಧಿಯವರ
ಠಕ್ಕತಗಲ್ ಮಾತಾಡುವ ತೂಕವನರಿಯದವರ
ಸೂತರ ಮನುಜರ ಸಂಗತಿ ಹಿಂಗಿಸಿ ತಾ ಶಿವಶಂಕರನಾಗಿರಬೇಕೊ
ಪೊಡವಿಪತಿ ಶಿಶುನಾಳ ವಡೆಯನ ಕಂಡು ನುಡಿ ಪುರಹರ ನಡಿ-
-ಗಳನೆಡವಿಡದೆಲೆ ||೨||



## ಧನಗಳಿಸಬೇಕು.

-ಕಡಕೋಳದ ಶ್ರೀ ಮಡಿವಾಳೇಶ್ವರರು

ಧನವ ಗಳಿಸಬೇಕು ಇಂಥಾದ್ದು । ಈ
ಜನರಿಗೆ ತಿಳಿಯದಂಥಾದ್ದು ।
ಅನುದಿನ ಅಜಹರಿ ಮನುಮುನಿಗಳಿಗೆಲ್ಲ ।
ಹೌದು ಹೌದು ಹೌದೆಂಬಂಥಾದ್ದು ॥ಪಲ್ಲ॥

ಕೊಟ್ಟರೆ ಹೋಗದಂಥಾದ್ದು । ಅದು
ಇಟ್ಟರೆ ತೀರದಂಥಾದ್ದು ।
ಕಟ್ಟಿದ ಗಂಟು ಬೈಲೊಳಗಿಟ್ಟರೆ ।
ಮುಟ್ಟಲಿ ಬಾರದಂಥಾದ್ದು ॥೧॥

ಕರ್ಮ ಬಾರದಂಥಾದ್ದು । ಅದರ
ಮರ್ಮ ತೋರದಂಥಾದ್ದು ।
ನಿರ್ಮಳವಾದ ಮನಕೆ । ದಾನ
ಧರ್ಮವನು ಮಾಡುವಂಥಾದ್ದು ॥೨॥

ಮರವಿಗೆ ಬಾರದಂಥಾದ್ದು । ನಿಜ
ಅರುವಿನಲ್ಲಿ ಇರುವಂಥಾದ್ದು ।
ಮರೆವು ಕಳೆದು ಶ್ರೀ ಗುರು । ಮಹಾಂತೇಶನ
ಕರುಣದಿಂದ ಕಾಯುವಂಥಾದ್ದು ॥೩॥

## ಶಿವಧ್ಯಾನ.

-ಶ್ರೀ ಘನಮಠ ನಾಗಭೂಷಣ ಶಿವಯೋಗಿಗಳು

ನಿಟಿಲಾಕ್ಷನ ಭಜಿಸೋ ಹೇ ಮನುಜ ನಿಟಿಲಾಕ್ಷನ ಭಜಿಸೋ ।
ಕುಟಿಲ ಪ್ರಪಂಚದ ಚಟುವಳಿದನುದಿನ ।ಪಲ್ಲ॥

ಜರೆಯೋಳ್ ಪರರಿಗೆ ನೆರೆಹಂಗಾಗುತೆ ।
ಮರಣವಾಗದೆ ಸುಖದಿರುವಾಗಲೆ ನೀ ॥೧॥

ಈ ಶಿವ ಸಮಯ ಮಾನಿಸ ಜನ್ಮವಿ- ।
ನ್ನೇಸುಕಾಲಕೆ ಸಿಗದೀ ಸಮಯದೆ ನೀ ॥೨॥

ಜಡಮತಿಗಳ ನುಡಿಗಡಣಕೆ ನೀ ಕಿವಿ- ।
ಗೊಡದಾ ಘನಮಠದೊಡೆಯನ ಬಿಡದೆ ನೀ ॥೩॥

## ಬೆಳಗಾಯಿತೇಳಮ್ಮ.

—ಶ್ರೀ ಸರ್ಪಭೂಷಣ ಶಿವಯೋಗಿಗಳು

ಕೋಳಿ ಕೂಗಿತು ಮಗಳೆ ಬೆಳಗಾಯಿತೇಳಮ್ಮ
ಹೇಳಲಿದರೊಳು ಮರ್ಮ ಬಹಳವಿದೆಯಮ್ಮ ॥ಪಲ್ಲವಿ॥

ಮೂರು ನದಿಗಳ ಸಂಗಮಸ್ಥಳದೊಳಾಡುತಿಹು-
ದಾರು ವರ್ಣಗಳದರ ಮಯ್ಯೊಳುಂಟು
ಹಾರಿ ಮೇಲಕ್ಕೆ ಹಂಸಂಗಳೆರಡನು ನುಂಗು-
ತೀರೈದು ತೆರನಾದ ಧ್ವನಿಗಳನೆ ತೋರಿ ॥೧॥

ಹಲವು ಮಂತ್ರದೊಳದರ ಹೆಸರೆ ಮೊದಲಿರುತಿಹುದು
ನೆಲಸಿಹವು ಚಂದ್ರತಾರೆಗಳದರೊಳು
ಜಲಜವೈದರ ಮೇಲೆ ಮನೆಮಾಡಿಕೊಂಡಿಹುದು
ಸಿಲುಕದಾಂಗೆ ಕೈಗಳಿಂದೆ ಪಿಡಿಯಲ್ಕೆ ॥೨॥

ಒಂದು ಬಾರದರ ದನಿಗೇಳಿದವರಿಗೆ ಮುಂದ-
ಕೆಂದೆಂದಿಗೆಯು ನಿದ್ರೆಬಾರದಿಹುದು
ತಂದೆ ತಾಯಿಲ್ಲದುದಿಸಿಹುದಳಿದು ಪೋಗದಿದ-
ರಂದವನು ಗುರುಸಿದ್ಧದೇವನೆ ಬಲ್ಲ ||೩||

## ಮನವ ಶಿಕ್ಷಿಸು.

—ಶ್ರೀ ಮುಪ್ಪಿನ ಷಡಕ್ಷರದೇವರು

ಏನು ಮಾಡಲಯ್ಯ ಎನ್ನ । ಹೀನಮನದ ಬಯಕೆಗಳನು
ಜ್ಞಾನಖಡ್ಗದಿಂದ ಕಡಿವರಾರ ಕಾಣೆನು ||ಪಲ್ಲ||

ಹಿಡಿವುದವನೆ ಹಿಡಿಯದಯ್ಯ
ಹಿಡಿಯದದನೆ ಹಿಡಿವುದಯ್ಯ
ಕೆಡುವನಡೆಯ ನಡೆಸಿಯನ್ನ ಭವಕೆ ಬರಿಸಿತು
ಬಡವ ನಾನು ಕಾಡುತಿಹುದು । ಹಿಡಿಯುವವರ ನಾನುಕಾಣೆ
ಕಡಿದು ಕಡಿದು ಹಾಕುವವರನಾರಕಾಣೆನು ||೧||

ನಾನು ನಿಮ್ಮ ನೆನೆವೆನೆನಲು । ತಾನು ನಿಮ್ಮನೆನೆಯದಯ್ಯ
ಶ್ವಾನನಂತೆ ಹಲವು ಕಡೆಗೆ ಹರಿವುತಿರ್ಪುದು
ಧ್ಯಾನಮೌನ ಜಪದೊಳಿರದು । ನಾನು ಇದರ ಸಂಗದಿಂದ
ಜ್ಞಾನಹೀನನಾಗಿ ಹೋದೆನಕ್ಕಟಕ್ಕಟ ||೨||

ಅಂಗಗುಣದ ನಡೆಗಳನು । ಹಿಂಗಿಸುತ್ತ ಬರುತಲಿಹುದು
ಲಿಂಗನೆನಹು ಎನಲು ಎಲ್ಲೊ ನುಸುಳಿ ಪೋಪುದು
ಮಂಗಳಾತ್ಮ ಷಡಕ್ಷರಿಯ । ಲಿಂಗ ನಿಮ್ಮ ನೆನೆಯದಿರ್ಪ
ಕೊಂಗು ಮನವ ಶಿಕ್ಷಿಸೆನ್ನ ಅಳಲು ಪೋಗಲಿ ||೩||

## ಸಂಸಾರದ ಗೊಡವೆ ಬೇಡ.

–ಶ್ರೀ ಶಿಶುನಾಳ ಶರೀಫಸಾಹೇಬರು

ಸಂಸಾರದ ಗೊಡವೆ ಇನ್ಯಾಕೆ
ಇನ್ಯಾರಿಗೆ ಬೇಕೊ ॥ಪಲ್ಲ॥

ಭವಸಾಗರದೊಳಗೆ ಸಂಸಾರದ ಗೊಡವೆ ಇನ್ಯಾಕೆ
ನವೆ ನವೆಯುತ್ತಿರಲು ಯಮತಾನು ಕೊಲುವಾಗ ॥ಅಪ॥

ಒಂಟಿಯ ಮೇಲೆ ಹತ್ತಿದೆನಪ್ಪಾ ಹತ್ತಿ,
ಘಂಟೆಯ ನುಡಿಸ್ಸಿದೆ ನನ ತಾಯವ್ವ
ಕಂಟಗಳ ಪರಿಹರಿಸಿ
ಸ.ಂಟರ ಗಾಳಿಯ ದಾಟಿ ನಡೆದು । ಮು-
ತ್ತಿಂಟು ಕೋಟಿಯ ಸಂಪೂರ್ಣ ಗೆದ್ದು ॥೧॥

ಮಂದಿಯೊಳು ಮಾನಕಂಜದಲೆ
ಸಂದಿ ಸಂದಿಯೊಳು ಸುಳಿದಾಡುತಲಿ
ಬಂಧುರ ಶಿಶುನಾಳ ತಂದೆಯ ಕಾಣಲು
ಹೊಂದಿದೆನಾತನ ದ್ವಂದ್ವ ಚರಣಕ್ಕೆ ॥೨॥

## ಶಂಕರಿ.

–ಕಡಕೋಳದ ಶ್ರೀ ಮಡಿವಾಳಪ್ಪನವರು

ದೇವಿಯ ನೆನೆಯಿರಿ ಭಾವ ಶುದ್ಧದಲಿ ।
ಕೇವಲ ಮೂರುತಿ ಶಂಕರಿಯೊ ।
ಆವ ಕಾಲದಲಿ ಹರನೊಳು ಬೆರೆದ ।
ಪಾವನ ಚರಿತ್ರೆ ಪಾರ್ವತಿಯೊ ॥ಪ॥

ಅಷ್ಟ ದೈತ್ಯರನು ಕುಟ್ಟಿಬಿಟ್ಟಿಹಳೊ ।
ಅಷ್ಟ ಮೂರ್ತಿಗಳಿಗಾಶ್ರಯಳೊ ।
ನಿಷ್ಠವಂತರಿಗೆ ನಿಜವ ತೋರುವಳೊ ।
ಶ್ರೇಷ್ಠ ಜನಕೆ ಪರಿಪಾಲಿಪಳೊ ॥೧॥

ಶುಂಭನಿಶುಂಭರ ಮರ್ದನ ಮಾಡಿದ ।
ಶಂಭು ಶಂಕರನ ರಾಣಿಯಳೊ ।
ನಂಬಿದ ಭಕ್ತರಿಗಿಂಬು ಗೊಡುವಳೊ ।
ಬಿಂಬಾಧರ ಭ್ರಮರಾಂಬೆಯೊ ॥೨॥

ಗಡಿಯ ಸೂರನಾದ ಒಡೆಯ ಚಿಣಮಗೇರಿ ।
ಮೃಡ ಮಹಂತೇಶನ ಮಡದಿಯಳೊ ।
ಎಡರ ಕಳಿದು ಜಡವ ಹರಿದು ಕೊಡುವಳೊ ।
ತಡಮಾಡದಲೆ ಮೋಕ್ಷವನೊ ॥೩॥

## ಮಗನ ತೂಗಿರಿ.

–ಶ್ರೀ ಬಾಲಲೀಲಾಮಹಾಂತ ಶಿವಯೋಗಿಗಳು

ಮಗನ ತೂಗಿರೋ । ಭಕ್ತರು ಮಗನ ತೂಗಿರೋ
ಆಗಜೆ ತನಗೆ ಮೊಲೆ ಹಾಲಿಲ್ಲದೆ । ಜಗಕೆ ಕಳುಹಿದಳು ಪುತ್ರನ ॥ಪ॥

ಭಕ್ತಿರಸವ ದಣಿಯಲುಂಡು । ಶಕ್ತಿವಂತನಾಗಿ ಬಹಳ
ಮುಕ್ತಿಮಾರ್ಗ ಪಿಡಿದು ಬಾರೆಂ- । ದ್ಯುಕ್ತಿಯಿಂದ ಕಳುಹಿದಳು ॥೧॥

ತಾಯಿತಂದೆಗಳನು ಅಗಲಲು- । ಪಾಯ ತಪ್ಪಿಧರೆಗೆ ಬಂದೆ
ಸಾಯಗೊಲಪೆ ಭವದಿ ಕೆಡಹಿ । ಘಾಯ ಮಾಸಿ ಜನ್ಮರೋಗದ ॥೨॥

ಪರಮ ಶಿಶು ಮಹಂತೇಶ ಗಿರಿಜೆ । ಹಿರಿಯ ತಾಯಿ ತಂದೆಗಳೆನ್ನ
ಮರೆತರವರು ಮಗನ ಚಿಂತೆ । ಗುರಿಯ ಮಾಡಿದರಯ್ಯ ನಿಮಗೆ ॥೩॥

## ಮಣ್ಣಬೊಂಬೆಯಂಥ ತನುವ ನಂಬಬೇಡ.

—ಶ್ರೀ ಸರ್ಪಭೂಷಣ ಶಿವಯೋಗಿಗಳು

ನಂಬಬೇಡವೋ ಮನುಜ । ನಂಬಬೇಡವೋ
ನಂಬಿ ಕೆಡುವರುಂಟೆ ಮಣ್ಣ । ಬೊಂಬೆಯಂಥ ತನುವನಿದನು ॥ಪ॥

ಮಾಯೆಯಿಂದ ಜನಿಸಿ ಬೆಳೆದು । ಕಾಯವೆನಿಸಿ ಸತ್ತು ಕಡೆಗೆ
ನಾಯಿ ನರಿಯು ತಿಂದು ಕೆಡುವ ಹೇಯವಾದ ವಪುವನಿದನು ॥೧॥

ನೂರು ಬಾಳ್ವೆನೆಂದು ತನ್ನ । ಸೇರಿನಲಿವರಾಶೆಯನ್ನು
ನೀರಕಲಸಿ ನಿಮಿಷದಲ್ಲಿ । ತೋರಿಯಳಿವ ದೇಹವಿದನು ॥೨॥

ಧರೆಯ ಭೋಗಕೆಳಸಿ ಪರವ । ಮರೆದು ತನ್ನ ನಚ್ಚಿದವರ-
ನೆರಡು ವಿಧದಿ ಕೆಡಿಸಿ ಯಮನ । ಪುರಕೆ ಕಳುಹುವಂಗವಿದನು ॥೩॥

ಸತ್ತು ಹುಟ್ಟಿ ತಾನು ತನ್ನ । ನಿತ್ಯವೆಂದು ಹೊಂದಿದವರ
ಕತ್ತೆಯಂತಿಹ ಪರಕ್ಕೆ । ಸುತ್ತಿಸುಳಿಪ ಗಾತ್ರವಿದನು ॥೪॥

ಒಡೆಯದುಡಿಯದಮಲಸುಖವ । ಪಡೆಯೆ ಶ್ರೀ ಗುರುಸಿದ್ಧನಿಂದೆ
ಕೊಡದ ತೆರದೊಳೊಡೆದು ಧರೆಯೊಳಡಗಿ ಕೆಡುವ ಜಡತನುವನು ॥೫॥

## ಪಾಹಿ ಪರಮೇಶ

—ಶ್ರೀ ಘನಮಠ ನಾಗಭೂಷಣ ಶಿವಯೋಗಿಗಳು

ಪಾಹಿ ಮಹೇಶ ಪಾಪವಿನಾಶ ।
ಮೋಹ ರಹಿತ ವೃಷವಾಹ ಗಿರೀಶ ॥ಪ॥

ಹಾರ ತುಷಾರ ಪಟೀರ ಪ್ರಗೌರಶ- ।
ರೀರ ನಿರುಪಮ ಕುಮಾರಜನಕ ಶಿವ ॥೧॥

ಅಂಗಜಭಂಗ ಮತಂಗ ಜಿನಾಂಬರ ।
ಮಂಗಳಮಯ ಮಹಾಲಿಂಗ ನಿರಾಮಯ ॥೨॥

ಘನಮಠವಾಸ ಶರಣ ಹೃದಯೇಶ ।
ಅನಘಯಾರಸವನಧೆ ಗಣೇಶ ॥೩॥

## ಧರಣಿ ಜನಕೆ ಕರುಣೆ ತೋರು.

—ಶ್ರೀ ಶಿಶುನಾಳ ಶರೀಫ ಸಾಹೇಬರು

ಕರುಣೆ ಬಾರದೇನೊ ಸದಾಶಿವ
ಧರಣಿ ಜನರು ಈ ಪರಿ ಮರುಗುವದು ಕಂಡು ||ಪ||

ಹುಟ್ಟಿಸಿದೆಲ್ಲೋ ಭೂಮಿ ಮೇಲೆ ಲೋಕವ
ಕಟ್ಟಿ ಆಳುವ ಸ್ವಾಮಿ
ಕೆಟ್ಟಕರ್ಮ ಕೂಲಿ ಇಟ್ಟು ಕೈಲಾಸದ
ಪಟ್ಟವಾಳುವ ಪರಮಾತ್ಮ ಪ್ರಭುವರ ||೧||

ಎಡಗಣ್ಣಿಲೆ ನೋಡಿದ್ಯಾ ಈ ದಕ್ಷಿಣ
ಕಡೆ ಬಾಗಿಲ ಮಾಡಿದ್ಯಾ
ಬಿಡದೆ ಪೊಡವಿ ಸ್ಥಳ ಇಹಪರ ಹಬ್ಬಿಸಿ
ಕಡು ಹರುಷದಿ ಸುಡುಗಾಡದಿ ಸೇರಿದಿಸಾಂಬಾ ||೨||

ತುಸು ದಯವಿರಬೇಕು ಈ ಮನುಜರ
ಹಸನಾಗಿ ಸಲುಹಬೇಕು
ವಸುಧಿಯೊಳು ಶಿಶುನಾಳಧೀಶನ ಸೇವಕ
ಉಸುರಿದ ಮಾತಿದು ಹಸನಾಗಿ ನೋಡಿಕೋ ||೩||



## ಬಿಡು ಬಾಹ್ಯದೊಳು ಡಂಭವ.

—ಶ್ರೀ ಸರ್ಪಭೂಷಣ ಶಿವಯೋಗಿಗಳು

ಬಿಡು ಬಾಹ್ಯದೊಳು ಡಂಭವ । ಮಾನಸದೊಳ-
ಗೆಡವಿಡದಿರು ಶಂಭುವ
ಒಡಲೊಳು ವಂಚಿಸಿ ಹೊರಗೆ ನೀ ಕೀರ್ತಿಯ
ಪಡೆವರೆ ಶಿವ ನಿನಗೊಲಿವನೆ ಮರುಳೆ ॥ಪಲ್ಲವಿ॥

ಜನ ಮೆಚ್ಚಿ ನಡಕೊಂಡರೇನುಂಟು ಲೋಕದಿ
ಮನಮೆಚ್ಚಿ ನಡಕೊಂಬುವುದೆ ಚಂದವು
ಜನರೇನು ಬಲ್ಲರು ಒಳಗಾಗೊ ಕೃತ್ಯವ
ಮನವರಿಯದ ಕಳ್ಳತನವಿಲ್ಲವಲ್ಲಾ ॥೧॥

ಜನರು ಮೆಚ್ಚುತಿ ನಿನ್ನ ಕೈಲಾಸಕೊಯ್ವರೆ
ಜನ ಮೆಚ್ಚದಿರೆ ಶಿವ ಬಿಡುತಿಹನೇ
ಜನರಿಲ್ಲಿ ನಿನ್ನನು ದೊಡ್ಡಾತನೆಂದರೆ
ಚಿನುಮಯ ಶಿವನಲ್ಲಿ ಅರಿಯನೆ ಮರುಳೇ ॥೨॥

ಮನದೊಳು ಶಿವ ತಾನು ಮನೆ ಮಾಡಿಕೊಂಡಿಹ
ಮನಮೆಚ್ಚಿ ನಡೆದರೆ ಶಿವ ಮೆಚ್ಚುವ
ಮನಕಂಜಿ ನಡೆಯದೆ ಜನಕಂಜಿ ನಡೆದರೆ
ಮನದಾಣ್ಮ ಗುರುಸಿದ್ಧ ಮರೆಯಾಗೊನಲ್ಲ ॥೩॥

## ವಿಷಯರಹಿತನಾಗು !

—ಶ್ರೀ ಶಿಶುನಾಳ ಶರೀಫ ಸಾಹೇಬರು

ಬಾಯಲ್ಲಿ ಬ್ರಹ್ಮವ ಓದಿದರೇನು ಛೀ
ನಾಯಿಜಲ್ಮಕ ಬಿದ್ದು ಹೊರಳುವೆಯಾ ಮನಸೇ ||ಪ||

ಕಾಯ ಜೀವದೊಳು ನ್ಯಾಯವ ಬೆಳಸಿ
ಮಾಯದೊಳಗೆ ಮುಳುಗೇಳುವಿ ಮನಸೇ ||೧||

ಅರಗಿಳಿಯಂದದಿ ಅರುಶಾಸ್ತ್ರವ ಓದಿ
ಅರಿಯದೆ ಮನಸೇ ವಿಷಯದೊಳ್ ಮುಳುಗುವಿ ಮನಸೇ ||೨||

ಪರಸ್ತ್ರೀ ಪರಧನ ಪರಸ್ತುತಿಯಲಿ
ದಿನಕಳೆಯುವಿ ಮನಸೇ ಹೊಲಸಿನ ಸುಂಬಳ
ಸೇವಿಪನೊಣದಂತೆ ||೩||

ತಿಳಿಯದೇ ವಿಷಯದೊಳು ಮುಳುಗುವಿ ಮನಸೇ
ಇಳೆಯೊಳು ಶಿಶುನಾಳಧೀಶನ ಭಜಿಸದೆ ಕರ್ಮವ
ಗಳಿಸುವಿ ಮನಸೇ ||೪||



## ಜೋಕೆ ಕಂಡ್ಯಾ ಆತ್ಮ.

—ಶ್ರೀ ಬಾಲಲೀಲಾ ಮಹಾಂತ ಶಿವಯೋಗಿಗಳು

ಜೋಕೆ ಕಂಡ್ಯಾ ಆತ್ಮಾ
ಜೋಕೆ ಕಂಡ್ಯಾ
ಕಾಕು ಸ್ತ್ರೀಯರ ಬಳಗವ–
ನೇಕ ಬರುತಿಹುದಿಲ್ಲಿ ॥ಪಲ್ಲ॥

ಮರವೆಯ ಮನೆಯೊಳ-
ಗರು ವಿಲ್ಲದಂಗನೆಯರು
ಪರಿಪರಿನೆರೆದು ನಿನ್ನ
ಮರುಳ ಮಾಡುವರಯ್ಯಾ ॥೧॥

ವಿರತಿ ವಿರತಿಯೆಂದು
ನಿರುತಾಗಿ ನುಡಿವೆ ನೀನು
ವಿರತಿಯಂತೆಂಬ ದೃಷ್ಟ
ಅರಿತರೆ ತಿಳಿವುದಿಲ್ಲಿ ॥೨॥

ನೋಡದೆ ನುಡಿಸದೆ
ಮಾಡಬಹುದು ವಿರತಿ
ನಾಡರಿಯಲು ಮಹಂತ
ಪ್ರೌಢನೊಳ್ ರತಿಯಿರಲಿ ॥೩॥

## ಗುರುದೇವನುಪಕೃತಿಯ ಮರೆವುದೆಂತು !

-ಶ್ರೀ ಸರ್ಪಭೂಷಣ ಶಿವಯೋಗಿಗಳು

ಗುರುದೇವ ನೀ ಮಾಡಿದುಪಕೃತಿಯನು ನಾನು
ಮರೆಯುವುದೆಂದಿಗಿಹದೊಳು ॥ಪಲ್ಲವಿ॥

ಪೊಡವಿಯೊಳಖಿಳ ವೇದಾಗಮ ಶಾಸ್ತ್ರವ
ಬಿಡದೆ ಸಾಧಿಸಿದ ವಾದಿಗಳೆಲ್ಲ
ಹೊಡೆದಾಡಿ ಕಾಣದ ಪರತತ್ತ್ವವನು ನೀನು
ಹಿಡಿದೆನ್ನ ಕರಕೆ ಕೊಟ್ಟುದದರಿಂದೆ ॥೧॥

ಕಂದಮೂಲಗಳ ಸೇವಿಸಿ ವಾಯುಗಳನೊತ್ತಿ
ಬಂಧಿಸಿ ಪಂಚಾಗ್ನಿಮಧ್ಯದೆ
ನಿಂದು ಯೋಗಿಗಳು ನೋಡುವ ಪರಬ್ರಹ್ಮವ
ತಂದೆನ್ನ ಕಣ್ಗೆ ತೋರಿದುದರಿಂದೆ ॥೨॥

ತರಳನೆನ್ನಯ ಮೇಲೆ ದಯೆಹುಟ್ಟಿ ಶಿವನೆ ಶ್ರೀ
ಗುರುಸಿದ್ಧನೆಂಬ ನಾಮವನಾಂತು
ಗುರುರೂಪದಿಂದೆನ್ನ ಬೋಧಿಸಿ ತನ್ನೊಳು
ಬೆರಸುತ್ತೆ ಮೋಕ್ಷವಿತ್ತುದರಿಂದ ॥೩॥

## ಏನು ಬೇಕಪ್ಪ ?

–ಕಡಕೋಳದ ಶ್ರೀ ಮಡಿವಾಳೇಶ್ವರರು

ಯಾಕಪ್ಪ ಏನು ಬೇಕಪ್ಪ
ನಿನ ಮನಸಪ್ಪ ಮುಂದ ನೆನಸಪ್ಪ
ಕನಸಿನ ಪರಿ ಸಂಸಾರಪ್ಪ
ನಿನ ಮನಸಿಗಿ ಬಂಧನ ಮಾಡಪ್ಪ ||ಪಲ್ಲ||

ರೊಕ್ಕ ಗಳಿಸಿದಿ ಭಾಳಪ್ಪ
ನಿನ್ನ ಮಕ್ಕಳಿಗಾದಾವು ನಾಳಿಪ್ಪ
ಫಕ್ಕನೆ ಬಿದ್ದು ನೀ ಹೋದೆಪ್ಪ
ನಿನ್ನ ರೊಕ್ಕ ಮಕ್ಕಳು ಯಾರಪ್ಪ ||೧||

ಮಡದಿಯ ಮಾತಿಗೆ ಮೆಚ್ಚಿದೆಯಪ್ಪ
ಗುರು ನುಡಿಕೇಳಂದರೆ ಎದೆಗಿಚ್ಚಪ್ಪ
ತೆಲಿಗೆ ಏರಿತು ಹುಚ್ಚಪ್ಪ
ಏರಿ ಇಳಿದ ಮೇಲೆ ಕುಂತು ಅತ್ತೆಪ್ಪ ||೨||

ಅಳದೇನೆಂದರೆ ಅಳಿಯಪ್ಪ
ನೀ ತಿಳಿದೇನಂದರೆ ತಿಳಿಯಪ್ಪ
ಗುಡ್ಡದ ತೆಳಿಯಾಕ ಇಳಿಯಪ್ಪ
ಗುರುಮಹಂತನ ಕೂಡಿ ಮುಕ್ತಿಯ ಪಡೆಯಪ್ಪ ||೩||

## ಅನುಭಾವದಡಿಗೆ !

-ಶ್ರೀ ಸರ್ಪಭೂಷಣ ಶಿವಯೋಗಿಗಳು

ಅನುಭಾವದಡಿಗೆಯ ಮಾಡಿ ಅದ-
ಕ್ಕನುಭವಿಗಳು ಬಂದು ನೀವೆಲ್ಲ ಕೂಡಿ ||ಪಲ್ಲವಿ||

ತನುವೆಂಬ ಭಾಂಡವ ತೊಳೆದು । ಕೆಟ್ಟ
ಮನದ ಜಂಜಡವೆಂಬ ಮುಸುರೆಯ ಕಳೆದು
ಘನವೆಂಬ ಮನೆಯನೆ ಬಳಿದು । ಅಲ್ಲಿ
ಬಿನುಗು ತ್ರಿಗುಣವೆಂಬುವೊಲೆಗುಂಡ ತುಳಿದು ||೧||

ವಿರತಿಯಂಬುವ ಮಡಿಯುಟ್ಟು । ಪೂರ್ಣ
ಹರಭಕ್ತಿಯೆಂಬ ನೀರನೆ ಎಸರಿಟ್ಟು
ಅರಿವೆಂಬ ಬೆಂಕಿಯ ಕೊಟ್ಟು । ಮಾಯಾ
ಮರನೆಯೆಂಬುವ ಕಾಷ್ಠಗಳನೆಲ್ಲ ಸುಟ್ಟು ||೨||

ಪರವೆಂಬ ಸಾಮಗ್ರಿಗೂಡಿ । ಸಾರ-
ತರ ಮೋಕ್ಷವೆಂದೆಂಬ ಪಾಕವ ಮಾಡಿ
ಹರನ ಶರಣರು ಸವಿದಾಡಿ । ನಮ್ಮ
ಗುರುಸಿದ್ಧ ದೇವನ ಚರಣವ ಪಾಡಿ ||೩||



## ಕಾಯ ಉನ್ನತಾಲಯ !

–ಶ್ರೀ ಮುಪ್ಪಿನ ಷಡಕ್ಷರದೇವರು

ಎನ್ನ ಕಾಯವು ನಿನಗೆ
ಉನ್ನತಾಲಯವಾಯಿ–
ತಿನ್ನೆನಗೆ ಭಯವುಂಟೆ ಎಲೆ ಲಿಂಗವೆ ||ಪಲ್ಲವಿ||

ಎನ್ನ ಕಾಲುಗಳೆರಡು
ಉನ್ನತದ ಕಂಭವೈ
ಎನ್ನ ಒಡಲೇ ನಿಮಗೆ ದೇವಾಲಯ ।
ಎನ್ನ ತೋಳುಗಳೆರಡು
ಉನ್ನತದ ಮದನಕೈ
ಎನ್ನ ಶಿರ ಸೌವರ್ಣ ಕಲಶವಯ್ಯ ||೧||

ಎನ್ನ ಕಿವಿ ಕೀರ್ತಿಮುಖ
ಎನ್ನ ನಾಲಗೆ ಘಂಟೆ
ಎನ್ನ ನಯನಗಳೆರಡು ಜ್ಯೋತಿ ನಿಮಗೆ ||
ಎನ್ನ ಮುಖವೆ ದ್ವಾರ–
ವೆನ್ನ ದಂತವೆ ಅದಕೆ
ಮಿನ್ನುತಿಹ ಮೌಕ್ತಿಕದ ಸೂಸಕಗಳು ||೨||

ಎನ್ನಧರ ಜವಳಿಗದ
ಎನ್ನ ನಾಸಾ ಪುಟವು
ನನ್ನಿಯಿಂ ಸೌರಭ್ಯ ರಸಘಟಿತವು ।
ಚೆನ್ನಾಗಿ ಬೀಸುವ
ಹೊನ್ನ ಜಾಳೀಂದ್ರವೈ
ಇನ್ನುಳಿದ ಉಪಕರಣವೆಂತೆಂದೆನೆ ||೩||

ಎನ್ನ ಸಮತೆಯೆ ಜಲವು
ಎನ್ನ ಸದ್ಗುಣ ಗಂಧ
ಎನ್ನ ನಿತ್ಯತ್ವವೆ ಅಕ್ಷತೆಗಳು ||

ಎನ್ನ ಜ್ಞಾನವೆ ಪುಷ್ಪ
ಎನ್ನ ಭಕ್ತಿಯೆ ಜೋನ
ಎನ್ನ ಮನವೆ ನಿಮಗೆ ಪೂಜಾರಿಯು ||೪||

ಇಂತಪ್ಪ ಪೂಜೆಯನು
ಸಂತಸದಿ ಕೈಕೊಳುತ
ಕಂತುಹರ ಶಿವಷಡಕ್ಷರಿ ಲಿಂಗವು ।
ಮುಂತೆ ಎನ್ನೊಳಗೆ ನಿ-
ಶ್ಚಿಂತನಾಗಿರಲು
ಚಿಂತೆಯುಂಟೆ ಹಲವು ಭವ ಭೀತಿಯ ||೫||

## ಮೂಕನಾಗಬೇಕು.

—ಕಡಕೋಳದ ಶ್ರೀ ಮಡಿವಾಳೇಶ್ವರರು

ಮೂಕನಾಗಬೇಕು ಈ ಜಗದೊಳು ಜ್ವಾಕ್ಯಾಗಿರಬೇಕು
ಕಾಕುಬುದ್ಧಿ ಕಡಿಗಿ ಹಾಯಿಸಲಾರದ
ಲೋಕದಗೊಡವಿ ನಿನಗ್ಯಾತಕಬೇಕು ||ಪಲ್ಲವಿ||

ಮಾತು ಕಲಿಯಬೇಕು
ಮಾತಿನ ನೀತಿ ತಿಳಿಯಬೇಕು
ಮಾತು ಬಲ್ಲ ಮಹಾಜ್ಞಾನಿಯಗೂಡ
ಕೋತಿ ಹಾಂಗ ಬೆನ್ನಹತ್ತಿರಬೇಕು ||೧||

ತತ್ತ್ವ ಕಲಿಯಬೇಕು
ತತ್ತ್ವದ ಅರ್ಥ ತಿಳಿಯಬೇಕು
ತತ್ತ್ವದಲ್ಲಿ ಮಹಾಜ್ಞಾನಿಯ ಗೂಡ
ಕತ್ತೆ ಕಾಂಗ ಬೆನ್ನಹತ್ತಿರಬೇಕು ||೨||

ಆಸೆ ಅಳಿಯಬೇಕು ಮನಸಿನ
ಹೇಸಿಕೆ ತೊಳಿಯಬೇಕು
ಆಸೆ ಅಳಿದು ಹೇಸಿಕೆ ತೊಳೆದು
ಈಶ ಮಹಾಂತನ ಪಾದ ಹಿಡಿಯಬೇಕು ||೩||

## ಅಕಳಂಕ ಗುರು.

—ಶ್ರೀ ಮುಪ್ಪಿನ ಷಡಕ್ಷರದೇವರು

ಸಕಲಲಕೆಲ್ಲಕೆ ನೀನೆ
ಅಕಳಂಕ ಗುರುವೆಂದು
ನಿಖಿಳ ಶಾಸ್ತ್ರವು ಪೇಳುತಿರಲರಿದೆನು ||ಪಲ್ಲವಿ||

ಯರಗಂಬಳಿಯ ಸಿದ್ಧ
ವರಲಿಂಗ ನಾಮದಿಂ
ಹರನೇ ನೀನೆನಗೆ ದೀಕ್ಷೆಯ ಮಾಡಿದೆ ।
ವರಷಡಕ್ಷರಿಯ ದೇ-
ವರ ನಾಮದಿಂದೆನ-
ಅರುಹಿದಿರಿ ಶಿವಶಾಸ್ತ್ರದನುಭವವನು ||೧||

ಅವರವರ ದರುಶನಕೆ
ಅವರವರ ವೇಷದಲಿ
ಅವರವರಿಗೆಲ್ಲ ಹರ ನೀನೊಬ್ಬನೆ ।
ಅವರವರ ಭಾವಕ್ಕೆ
ಅವರವರ ಪೂಜೆಗಂ
ಅವರವರಿಗೆಲ್ಲ ಶಿವ ನೀನೊಬ್ಬನೆ ||೨||

ಹೋರಾಟವಿಕ್ಕಿಸಲು
ಬೇರಾದೆಯಲ್ಲದೆ
ಬೇರುಂಟೆ ಜಗದೊಳಗೆ ಎಲೆದೇವನೆ ।
ಆರೂ ಅರಿಯರು ನೀನು
ಬೇರಾದ ಪರಿಗಳನ್ನು
ಮಾರಾರಿ ಶಿವಷಡಕ್ಷರಿ ಲಿಂಗವೇ ||೩||

## ನೀತಿಯ ಪಥ.

—ಕಡಕೋಳದ ಶ್ರೀ ಮಡಿವಾಳೇಶ್ವರರು

ಒಳ್ಳೇ ಮಾರ್ಗದಿ ಹೋಗಬೇಕು ತೊಡ-
ಕುಳ್ಳ ಮಾರ್ಗದಿ ಹೋಗದೆ ನಿಲ್ಲಬೇಕು ||ಪಲ್ಲವಿ||

ಗುರುಭಕ್ತದೊಳಗಾಡಬೇಕು । ತಾನು
ಹರಭಕ್ತರ ಕಂಡು ನಲಿದಾಡಬೇಕು
ಪರಹಿತ ಮಾಡಬೇಕು ದುಷ್ಟ
ದುರ್ಜನರ ಗೋಷ್ಠಿ ಬಿಡಬೇಕು ||೧||

ಸ್ತುತಿ ಭಜನೆಯೊಳು ಇರಬೇಕು । ತಾನು
ಸತತ ಶಾಂತಿ ತಾಳಬೇಕು
ಹಿತಭಾಷೆಗಳನಾಡಬೇಕು । ಜ್ಞಾನ
ಗತಿಯನೆ ಅನುದಿನ ಕೋರಬೇಕು ||೨||

ಸತ್ಯವಾದುದನ್ನೆ ನಂಬಬೇಕು । ಇಲ್ಲಿ
ಮಿಥ್ಯ ವಸ್ತುಗಳಾಸೆ ಬಿಡಬೇಕು
ನೀತಿಯ ಪಥವನೇರಬೇಕು । ನಮ್ಮ
ಸತ್ಯ ಮಹಾಂತೇಶನ ಹೊಂದಬೇಕು ||೩||



# ಸೂಳ್ನುಡಿ ಸಂಪದ.

## ದ್ವಿತೀಯ ಸಂಪದ – ವಚನ ವಲ್ಲರಿ.

೧

ಗುರುವೆ ಪರತತ್ವವು ತಾನೆ ನೋಡಾ. ಗುರುವೆ ಪರವಸ್ತುವು ತಾನೆ ನೋಡಾ ಗುರುವೆ ಪರಬ್ರಹ್ಮವು ತಾನೆ ನೋಡಾ. ಗುರುವೆ ಪರಶಿವನು ತಾನೆ ನೋಡಾ. ಗುರುವಿನಿಂದೆ ಪರವಿಲ್ಲವೆಂದು ಸಕಲ ಶ್ರುತಿಗಳು ಹೊಗಳುತಿಪ್ಪವು ನೋಡಾ. ಇಂತಪ್ಪ ಶ್ರೀಗುರುವಿಗೆ ನಮೋ ನಮಃ ಎಂಬೆನಯ್ಯಾ ಅಖಂಡೇಶ್ವರಾ.

೨

ಗುರುಚರಣವ ಪೂಜಿಸಿ ಎನ್ನ ಹಸ್ತಂಗಳು ಪರುಷವಾದವು. ಗುರು ಚರಣವ ನೋಡಿ ಎನ್ನ ಕಂಗಳು ಪರುಷವಾದವು. ಗುರು ಚರಣವ ಹಾಡಿ ಹರಸಿ ಎನ್ನ ಜಿಹ್ವೆ ಪರುಷವಾಯಿತ್ತು. ಗುರುಚರಣವ ನೆನೆದು ಎನ್ನ ಮನ ಪರುಷವಾಯಿತ್ತು. ಗುರುಚರಣವ ಧ್ಯಾನಿಸಿ ಎನ್ನ ಭಾವ ಪರುಷವಾಯಿತ್ತು ನೋಡಾ ಅಖಂಡೇಶ್ವರಾ.

೩

ಎನ್ನ ತನುವ ಶೋಧಿಸಿ ಚಿನುಮಯಲಿಂಗವ ಮಾಡಿ ತೋರಿದನಯ್ಯ ಸದ್‌ಗುರು. ಎನ್ನ ಮನವ ಶೋಧಿಸಿ ಮನಘನಲಿಂಗವ ಮಾಡಿ ತೋರಿದನಯ್ಯ ಸದ್‌ಗುರು. ಎನ್ನ ಭಾವವ ಶೋಧಿಸಿ ಭಾವಭರಿತ ಲಿಂಗವ ಮಾಡಿ ತೋರಿದನಯ್ಯಾ ಸದ್‌ಗುರು. ಎನ್ನ ಕರಣಂಗಳ ಕಳೆದು ಲಿಂಗ ಕರಣಂಗಳ ಮಾಡಿದ ಸದ್‌ಗುರುದೇವಂಗೆ ನಮೋ ನಮ: ಎಂಬೆನಯ್ಯಾ ಅಖಂಡೇಶ್ವರಾ.

೪

ಶ್ರೀ ಗುರು ಕರುಣಿಸಿ ಅಂಗದ ಮೇಲೆ ಲಿಂಗವ ಧರಿಸಿದ ಕಾರಣ ಸರ್ವಾಂಗವು ಲಿಂಗವಾಯಿತ್ತು. ಅದೆಂತೆಂದೊಡೆ: ಅಗ್ನಿಯಿಂದ ತಪ್ತವಾದ ಲೋಹದ ಪುತ್ಥಳಿಯಂತೆ ಒಳಗೂ ಹೊರಗೂ ಏಕವಾಗಿ ಲಿಂಗವೇ ಬೆಳಗುತ್ತಿದ್ದ ಕಾರಣ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ ನಿಮ್ಮ ಶರಣ ಸರ್ವಾಂಗಲಿಂಗಿಯಾದನು.

೫

ಶಿವನೇ ತಾನೆನಗೆ ಗುರುವಾಗಿ ಬಂದು, ಎನ್ನ ಸಂಸಾರ ಸಾಗರವ ದಾಂಟಿಸಿ, ಅಖಂಡ ಪರಮ ಚೈತನ್ಯ ಶಿವಲಿಂಗವ ವಿಶ್ವದೊಳಗೆಲ್ಲಿಯೂ ಕಾಂಬಂತೆ ತೋರಿಸಿ, ವಿಶ್ವವ ಲಿಂಗದೊಳಗೆ ತೋರಿ, ಲಿಂಗವನೆನ್ನಂಗದೊಳ ಹೊರಗೆ ತೋರಿ, ಅಂಗವ ಲಿಂಗದೊಳಗಿರಿಸಿ ರಕ್ಷಿಸಿದನಯ್ಯ, ಎನ್ನ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನು.

೬

ಸಕಲ ವಿಸ್ತಾರದೊಳಗೆಲ್ಲ ಲಿಂಗವ ತೋರಿದ, ಆ ಲಿಂಗದೊಳಗೆ ಎನ್ನ ತೋರಿದ, ಎನ್ನೊಳಗೆ ತನ್ನ ತೋರಿದ ಮಹಾಗುರುವಿಂಗೆ ನಮೋ ನಮ: ಎಂಬೆನಯ್ಯಾ ಅಖಂಡೇಶ್ವರಾ !

೭

ಗುರುಕರುಣವ ಪಡೆದುದಕ್ಕೆ ಚಿಹ್ನವಾವುದೆಂದಡೆ ಃ ಅಂಗದ ಮೇಲೆ ಲಿಂಗ ಸ್ವಾಯತ್ತವಾಗಿರಬೇಕು. ಅಂಗದ ಮೇಲೆ ಲಿಂಗ ಸ್ವಾಯತ್ತವಿಲ್ಲದೆ ಬರಿದೆ ಗುರುಕರುಣವಾಯಿತ್ತೆಂದಡೆ ಅದೆಂತೊ ? ಲಿಂಗವಿಹೀನನಾಗಿ ಗುರು ಕರುಣವುಂಟೆ ? ಇಲ್ಲ, ಆ ಮಾತ ಕೇಳಲಾಗದು. ಇದು ಕಾರಣ ಲಿಂಗಧಾರಣ-ವುಳ್ಳುದೆ ಸದಾಚಾರ, ಇಲ್ಲದಿದ್ದರೆ ಅನಾಚಾರವೆಂಬೆನಯ್ಯಾ ತೆಲುಗೇಶ್ವರಾ.

೮

ಜಗದಗಲ, ಮುಗಿಲಗಲ, ಮಿಗೆಯಗಲ, ನಿಮ್ಮಗಲ! ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ. ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮಕುಟ ! ಅಗಮ್ಯ ಅಗೋಚರ ಅಪ್ರತಿಮ ಲಿಂಗವೆ, ಕೂಡಲಸಂಗಮದೇವಯ್ಯಾ, ಎನ್ನ ಕರ-ಸ್ಥಳಕ್ಕೆ ಬಂದು ಚುಳುಕಾದಿರಯ್ಯ !!

೯

ಸಾಕಾರವಿಡಿದರ್ಚನೆ ಪೂಜನೆಯ ಮಾಡುವುದಲ್ಲದೆ, ನಿರಾಕಾರವ ನಂಬಲಾಗದು. ಶ್ರೀ ಗುರುಲಿಂಗವು ಪ್ರಾಣಲಿಂಗವನು ಕರಸ್ಥಲದಲ್ಲಿ ಬಿಜ-ಯಂಗೈಸಿ ಕರುಣಿಸಿದ ಬಳಿಕ, ವಜ್ರದಲ್ಲಿ ಬಯಲನರಸುವರೇ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ ?

೧೦

ಹಾಡಿರೋ ಜಿಹ್ವೆ ದಣಿಯದೆ ಲಿಂಗವ. ನೋಡಿರೋ ಕಂಗಳು ದಣಿ-ಯದೆ ಲಿಂಗವ. ಮಾಡಿರೋ ಪೂಜೆಯ ಹಸ್ತ ದಣಿಯದೆ ಲಿಂಗವ. ಬೇಡಿರೋ ವರವ ಮನ ಬಂದ ಪರಿಯಲ್ಲಿ ನಮ್ಮ ಅಖಂಡೇಶ್ವರ ಲಿಂಗವ.

೧೧

ಕಲ್ಲನಾಗರ ಕಂಡರೆ ಹಾಲನೆರೆಯೆಂಬರು, ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯಾ ! ಉಂಬ ಜಂಗಮ ಬಂದರೆ ನಡೆಯೆಂಬರು ! ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯಾ ! ನಮ್ಮ ಕೂಡಲಸಂಗನ ಶರಣರ ಕಂಡುದಾಸೀನವ ಮಾಡಿದರೆ, ಕಲ್ಲ ತಾಗಿದ ಮಿಟ್ಟೆಯಂತಪ್ಪರಯ್ಯಾ.

೧೨

ಜಂಗಮವೆನ್ನ ಪ್ರಾಣ, ಜಂಗಮವೆನ್ನ ಜೀವ, ಜಂಗಮವೆನ್ನ ನಿಧಿ ನಿಧಾನ, ಜಂಗಮವೆನ್ನ ಪುಣ್ಯದ ಫಲ, ಜಂಗಮವೆನ್ನ ಹರುಷದ ಮೇರೆ, ಚೆನ್ನಮಲ್ಲಿಕಾರ್ಜುನ ಜಂಗಮದ ತಿಂಥಿಣಿಯಲ್ಲಿ ಓಲಾಡುವೆ.

೧೩

ಜಂಗಮಕ್ಕೆ ಮಾತಾಪಿತರಿಲ್ಲ, ಜಂಗಮಕ್ಕೆ ಜಾತಿಬಂಧುಗಳಿಲ್ಲ, ಜಂಗ-ಮಕ್ಕೆ ನಾಮರೂಪುಗಳಿಲ್ಲ, ಜಂಗಮಕ್ಕೆ ಸೀಮೆಸಂಗಗಳಿಲ್ಲ, ಜಂಗಮಕ್ಕೆ ಕುಲ ಗೋತ್ರಗಳಿಲ್ಲ, ಜಂಗಮಕ್ಕೆ ಮಲ ಮಾಯೆಗಳಿಲ್ಲಾ ನೋಡಾ ಅಖಂಡೇಶ್ವರಾ.

೧೪

ಒಡಲಿಲ್ಲದಾತ ಜಂಗಮ, ಪ್ರಾಣವಿಲ್ಲದಾತ ಭಕ್ತನಯ್ಯಾ, ಆಚಾರವೇ ಜಂಗಮ, ವಿಚಾರವೇ ಭಕ್ತನಯ್ಯ. ಆಚಾರ ವಿಚಾರವೆಂಬುದು ಸ್ವಾನು-ಭಾವವು ನೋಡಾ ಕೂಡಲಸಂಗಮದೇವಾ.

೧೫

ನುಡಿದರೆ ಮುತ್ತಿನ ಹಾರದಂತಿರಬೇಕು, ನುಡಿದರೆ ಮಾಣಿಕ್ಯದ ದೀಪ್ತಿ-ಯಂತಿರಬೇಕು, ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು, ನುಡಿದರೆ ಲಿಂಗ ಮೆಚ್ಚಿ "ಅಹುದಹುದೆ"ನಬೇಕು, ನುಡಿಯೊಳಗಾಗಿ ನಡೆಯದಿದ್ದರೆ ಕೂಡಲ ಸಂಗಮ ದೇವನೆಂತೊಲಿವನಯ್ಯಾ ?

೧೬

ಮಾತೆಂಬುದು ಜ್ಯೋತಿರ್ಲಿಂಗ! ಸ್ವರವೆಂಬುದು ಪರತತ್ವ! ತಾಳೋಷ್ಠ ಸಂಪುಟವೆಂಬುದೇ ನಾದಬಿಂದುಕಳಾತೀತ ! ಗೋಹೇಶ್ವರನ ಶರಣರು ನುಡಿದು ಸೂತಕಿಗಳಲ್ಲ ಕೇಳಾ ಮರುಳೆ.

೧೭

ಕೆರೆಹಳ್ಳ ಬಾವಿಗಳು ಮೈದೆಗೆದರೆ ಗುಳ್ಳೆ ಗೊರಚೆ ಚಿಪ್ಪುಗಳು ಕಾಣ ಬಹುದು ವಾರಿಧಿ ಮೈದೆಗೆದರೆ ರತ್ನಂಗಳು ಕಾಣಬಹುದು. ಕೂಡಲಸಂಗನ ಶರಣರು ಮನದೆರೆದು ಮಾತನಾಡಿದರೆ ಲಿಂಗವೆ ಕಾಣಬಹುದು !

೧೮

ಕಡೆಗೀಲಿಲ್ಲದ ಬಂಡಿ ಹೊಡೆಗೆಡೆವುದ ಮಾಬುದೆ ? ಕಡೆಗೀಲು ಬಂಡಿ-ಗಾಧಾರ. ಕಡುದರ್ಪವೇರಿದ ಒಡಲೆಂಬ ಬಂಡಿಗೆ ಮೃಡಶರಣರ ನುಡಿಗಡಣವೇ ಕಡೆಗೀಲು ಕಾಣಾ ರಾಮನಾಥ.

೧೯

ಕಾಲ ತೊರೆಗೆ ಬೆಲ್ಲದ ಕೆಸರು. ಸಕ್ಕರೆಯ ಮಳಲು ತವರಾಜದ ನೊರೆ ತೆರೆಯಂತೆ ಆದ್ಯರ ವಚನ ವಿರಲು ಬೇರೆ ಬಾವಿಯ ತೋಡಿ, ಉಪ್ಪು ನೀರ ನುಂಬುವವನ ವಿಧಿಯಂತೆ ಆಯಿತ್ತೆನ್ನ ಮತಿ ಕೂಡಲಸಂಗಮದೇವಾ.

೨೦

ವಿಶ್ವದೊಳಗೆಲ್ಲಾ ನೀನೆ ದೇವಾ, ವಿಶ್ವಭರಿತನು ನೀನೆ ದೇವಾ, ವಿಶ್ವ-ರೂಪನು ನೀನೆ ದೇವಾ, ವಿಶ್ವಪತಿ ನೀನೆ ದೇವಾ. ವಿಶ್ವಾತೀತನು ನೀನೆ ದೇವಾ ಅಖಂಡೇಶ್ವರಾ.

೨೧

ದೇವನೊಬ್ಬ ನಾಮ ಹಲವು. ಪರಮ ಪತಿವ್ರತೆಗೆ ಗಂಡನೊಬ್ಬ ! ಮತ್ತೊಂದಕ್ಕೆರಗಿದರೆ ಕಿವಿಮೂಗ ಕೊಯ್ವನು ! ಹಲವು ದೈವದ ಎಂಜಲ ತಿಂಬುವರನೇನೆಂಬೆ ಕೂಡಲಸಂಗಮದೇವಾ ?

೨೨

ಅರಗು ತಿಂದು ಕರಗುವ ದೈವವ. ಉರಿಯ ಕಂಡರೆ ಮುರುಟುವ ದೈವವನೆಂತು ಸರಿಯೆಂಬೆನಯ್ಯಾ ? ಅವಸರ ಬಂದರೆ ಮಾರುವ ದೈವವನೆಂತು ಸರಿಯೆಂಬೆನಯ್ಯಾ ? ಅಂಜಿಕೆಯಾದರೆ ಹೂಳುವ ದೈವವನೆಂತು ಸರಿಯೆಂಬೆನಯ್ಯಾ ? ಸಹಜಭಾವ ನಿಜೈಕ್ಯ ಕೂಡಲಸಂಗಮದೇವನೊಬ್ಬನೇ ದೇವ.

೨೩

ಎತ್ತೆತ್ತ ನೋಡಿದತ್ತತ್ತ ನೀನೆ ದೇವಾ, ಸಕಲ ವಿಸ್ತಾರದ ರೂಹು ನೀನೆ ದೇವಾ, ವಿಶ್ವತೋ ಚಕ್ಷು ನೀನೆ ದೇವಾ, ವಿಶ್ವತೋಮುಖ ನೀನೆ ದೇವಾ, ವಿಶ್ವತೋ ಬಾಹು ನೀನೆ ದೇವಾ, ವಿಶ್ವತೋ ಪಾದ ನೀನೆ ದೇವಾ ಕೂಡಲಸಂಗಮದೇವಾ.

೨೪

ಆಸೆಗೆ ಸತ್ತುದು ಕೋಟಿ, ಆಮಿಷಕ್ಕೆ ಸತ್ತುದು ಕೋಟಿ, ಹೊನ್ನು ಹೆಣ್ಣು ಮಣ್ಣಿಂಗೆ ಸತ್ತುದು ಕೋಟಿ, ಗೊಹೇಶ್ವರಾ ನಿಮಗಾಗಿ ಸತ್ತವರನಾರನೂ ಕಾಣೆ.

೨೫

ಬಡತನಕ್ಕೆ ಉಂಬುವ ಚಿಂತೆ, ಉಣಲಾರದೆ ಉಡುವ ಚಿಂತೆ, ಉಡಲಾರದೆ ಇಡುವ ಚಿಂತೆ, ಇಡಲಾದರೆ ಹೆಂಡಿರ ಚಿಂತೆ, ಹೆಂಡಿರಾದರೆ ಮಕ್ಕಳ ಚಿಂತೆ, ಮಕ್ಕಳಾದರೆ ಬದುಕಿನ ಚಿಂತೆ, ಬದುಕಾದರೆ ಕೇಡಿನ ಚಿಂತೆ, ಕೇಡಾದರೆ ಮರಣದ ಚಿಂತೆ, ಇಂತೀ ಹಲವು ಚಿಂತೆಯಲಿ ಇಪ್ಪವರನು ಕಂಡೆನು. ಶಿವನ ಚಿಂತೆಯಲಿದ್ದವರೊಬ್ಬರನು ಕಾಣೆನೆಂದಾತ ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.

೨೬

ಉಂಬ ಬಟ್ಟಲು ಬೇರೆ ಕಂಚಲ್ಲ ನೋಡುವ ದರ್ಪಣ ಬೇರೆ ಕಂಚಲ್ಲ. ಭಾಂಡ ಒಂದೇ ಭಾಜನ ಒಂದೆ, ಬೆಳಗೆ ಕನ್ನಡಿಯೆನಿಸಿತ್ತಯ್ಯಾ ! ಅರಿದರೆ ಶರಣ. ಮರೆದರೆ ಮಾನವ. ಮರೆಯದೆ ಪೂಜಿಸು ಕೂಡಲಸಂಗಯ್ಯನ.

೨೭

ನೆರೆ ಕೆನ್ನೆಗೆ ತೆರೆ ಗಲ್ಲಕೆ ಶರೀರ ಗೂಡುವೋಗದ ಮುನ್ನ, ಹಲ್ಲು ಹೋಗಿ ಬೆನ್ನು ಬಾಗಿ ಅನ್ಯರಿಗೆ ಹಂಗಾಗದ ಮುನ್ನ, ಕಾಲ ಮೇಲೆ ಕೈಯನೂರಿ ಕೋಲ ಹಿಡಿಯದ ಮುನ್ನ, ಮುಪ್ಪಿಂದೊಪ್ಪವಳಿಯದ ಮುನ್ನ, ಮೃತ್ಯು ಮುಟ್ಟದ ಮುನ್ನ ಪೂಜಿಸು ನಮ್ಮ ಕೂಡಲಸಂಗಮದೇವನ.

೨೮

ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದರೆ, ಹಿಡಿದಿರ್ದ ಲಿಂಗವು ಘಟ-ಸರ್ಪನಂತೆ ! ನುಡಿಯಲು ಬಾರದು, ನಡೆಯಲು ಬಾರದು, ಲಿಂಗ ದೇವನೆ ದಿವ್ಯವೋ ಅಯ್ಯಾ ! ಬಡವನ ಕೋಪ ಅವುಡಿಗೆ ಮೃತ್ಯುವಾದಂತೆ, ಕಡೆ-ದಾಂಟದು ಕಾಣಾ ಕೂಡಲಸಂಗಮದೇವಾ.

೨೯

ದಯವಿಲ್ಲದ ಧರ್ಮವದೇವುದಯ್ಯಾ ? ದಯವೇ ಬೇಕು ಸಕಲ ಪ್ರಾಣಿ ಗಳೆಲ್ಲರಲ್ಲಿಯೂ ; ದಯವೇ ಧರ್ಮದ ಮೂಲವಯ್ಯಾ, ಕೂಡಲಸಂಗಯ್ಯ ನಂತಲ್ಲದೊಲ್ಲನಯ್ಯಾ.

೩೦

"ಏನಿ ಬಂದಿರಿ ಹದುಳವಿದ್ದಿರೆ" ? ಎಂದರೆ ನಿಮ್ಮ ಮೈ ಸಿರಿ ಹಾರಿ ಹೋಹುದೆ ? "ಕುಳ್ಳಿರೆಂ" ದರೆ ನೆಲ ಕುಳಿಹೋಹುದೆ ? ಒಡನೆ ನುಡಿದರೆ ಶಿರ ಹೊಟ್ಟೆಯೊಡೆವುದೆ ? ಕೊಡಲಿಲ್ಲದಿದ್ದರೊಂದು ಗುಣವಿಲ್ಲದಿರ್ದಡೆ, ಕೆಡಹಿ ಮೂಗ ಕೊಯ್ಯದೆ ಮಾಣ್ಬನೆ ಕೂಡಲಸಂಗಮದೇವನು. ?

೩೧

ಕಂಡ ಭಕ್ತರಿಗೆ ಕೈ ಮುಗಿಯುವಾತನೆ ಭಕ್ತ; ಮೃದು ವಚನವೇ ಸಕಲ ಜಪಂಗಳಯ್ಯಾ, ಮೃದುವಚನವೇ ಸಕಲ ತಪಂಗಳಯ್ಯಾ, ಸದುವಿನಯವೇ ಸದಾಶಿವನೊಲುಮೆಯಯ್ಯಾ ; ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ.

೩೨

ಹಾವು ತಿಂದವರ ನುಡಿಸಬಹುದು ಗರ ಹೊಡೆದವರ ನುಡಿಸಬಹುದು. ಸಿರಿಗರ ಹೊಡೆದವರ ನುಡಿಸಲು ಬಾರದು ನೋಡಯ್ಯ ! ಬಡತನವೆಂಬ ಮಂತ್ರವಾದಿ ಹೊಗಲು ಒಡನೆ ನುಡಿವರು ಕೂಡಲಸಂಗಮದೇವಾ.

೩೩

ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದಯ್ಯ ! ನಾಯ ಹಾಲು ನಾಯಿಗಲ್ಲದೆ ಪಂಚಾಮೃತಕ್ಕೆ ಸಲ್ಲದಯ್ಯಾ. ನಮ್ಮ ಕೂಡಲ ಸಂಗನ ಶರಣರಿಗಲ್ಲದೆ ಮಾಡುವ ಅರ್ಥ ವ್ಯರ್ಥ ಕಂಡಯ್ಯಾ !

೩೪

ನೂರನೋದಿ ನೂರ ಕೇಳಿದರೇನು ? ಆಶೆ ಹರಿಯದು, ರೋಷ ಬಿಡದು ಮಜ್ಜನಕ್ಕೆರೆದು ಫಲವೇನು ? ಮಾತಿನಂತೆ ಮನವಿಲ್ಲದ ಜಾತಿ ಡೊಂಬರ ನೋಡಿ ನಗುವ ನಮ್ಮ ಕೂಡಲಸಂಗಮದೇವ.

೩೫

ಲೋಕದ ಡೊಂಕ ನೀವೇಕೆ ತಿದ್ದುವಿರಿ ? ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ, ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ, ನೆರೆಮನೆಯ ದುಃಖಕ್ಕೆ ಅಳುವವರ ಮೆಚ್ಚ ಕೂಡಲಸಂಗಮದೇವ.

೩೬

ತಾ ಒಳ್ಳೆಯವನಾದರೆ ಸರ್ವರೂ ತನಗೆ ಒಳ್ಳೆಯವರಾಗಿರ್ಪರು. ತಾ ಹೀನನಾದರೆ ಸರ್ವರೂ ತನಗೆ ಹೀನರಾಗಿರ್ಪರು, ತಾ ಒಳ್ಳೆಯವನಾಗಿ ಸರ್ವರೂ ತನಗೆ ಹೀನವಾದರೆ, ಅದು ತನ್ನ ಪೂರ್ವದ ಕರ್ಮ. ತಾ ಹೀನ-ನಾಗಿ ಸರ್ವರೂ ತನಗೆ ಒಳ್ಳೆಯವರಾದರೆ, ಅದು ತನ್ನ ದೈವದ ಬಲವು ನೋಡಾ ಅಖಂಡೇಶ್ವರಾ.

೩೭

ಶಿವನೇ ದೈವ. ಶಿವಭಕ್ತನೇ ಕುಲಜ, ಷಡಕ್ಷರಿಯೇ ಮಂತ್ರ, ಕೊಲ್ಲ-ದಿಪ್ಪುದೇ ಧರ್ಮ, ಅಧರ್ಮದಿಂದ ಬಂದುದನೊಲ್ಲದಿಪ್ಪುದೇ ನೇಮ. ಆಶೆ ಇಲ್ಲದಿಪ್ಪುದೇ ತಪ- ರೋಷವಿಲ್ಲದಿಪ್ಪುದೇ ಜಪ. ವಂಚನೆ ಇಲ್ಲದಿಪ್ಪುದೇ ಭಕ್ತಿ. ಹೆಚ್ಚುಕುಂದಿಲ್ಲದಿಪ್ಪುದೇ ಸಮಯಾಚಾರ ಇದು ಸತ್ಯ, ಶಿವ ಬಲ್ಲ, ಶಿವನಾಣೆ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

೩೮

ಹರಿವ ಹಾವಿಗಂಜೆ, ಉರಿಯ ನಾಲಗೆಗಂಜೆ, ಸುರಗಿಯ ಮೊನೆಗಂಜೆ ! ಒಂದಕ್ಕಂಜುವೆ, ಒಂದಕ್ಕಳುಕುವೆ ; ಪರಸ್ತ್ರೀ ಪರಧನವೆಂಬ ಜೂಬಿಂಗಂಜುವೆ! ಮುನ್ನಂಜದ ರಾವಣನೇವಿಧಿಯಾದ ! ಅಂಜುವೆನಯ್ಯಾ ಕೂಡಲಸಂಗಮ ದೇವ

೩೯

ಕಳಬೇಡ, ಕೊಲಬೇಡ ; ಹುಸಿಯ ನುಡಿಯಲು ಬೇಡ ; ಮುನಿಯ ಬೇಡ, ಅನ್ಯರಿಗೆ ಅಸಹ್ಯಪಡಬೇಡ ; ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ, ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ, ಇದೇ ನಮ್ಮ ಕೂಡಲಸಂಗಮದೇವರನೊಲಿಸುವ ಪರಿ !

೪೦

ಮಡಕೆಯ ಮಾಡುವರೆ ಮಣ್ಣೇ ಮೊದಲು ; ತೊಡಗೆಯ ಮಾಡುವರೆ ಹೊನ್ನೇ ಮೊದಲು ; ಶಿವಪಥವನರಿವಡೆ ಗುರುಪಥವೆ ಮೊದಲು ; ಕೂಡಲ ಸಂಗಮದೇವರನರಿವರೆ ಶರಣರ ಸಂಗವೆ ಮೊದಲು.

೪೧

ಅರಿಯದವರೊಡನೆ ಸಂಗವ ಮಾಡಿದರೆ ಕಲ್ಲು ಹೊಯ್ದು ಕಿಡಿಯ ತೆಗೆದುಕೊಂಬಂತೆ, ಬಲ್ಲವರೊಡನೆ ಸಂಗವ ಮಾಡಿದರೆ ಹೊಸೆದು ಬೆಣ್ಣೆಯ ತೆಗೆದುಕೊಂಬಂತೆ, ಚೆನ್ನಮಲ್ಲಿಕಾರ್ಜುನಯ್ಯ, ನಿಮ್ಮ ಶರಣರ ಸಂಗ ಕರ್ಪೂರ ಗಿರಿಯ ಉರಿಕೊಂಡಂತೆ.

೪೨

ಸಾರ ! ಸಜ್ಜನರ ಸಂಗವ ಮಾಡುವುದು. ದೂರ ! ದುರ್ಜನರ ಸಂಗ ಬೇಡವಯ್ಯಾ, ಅಂತರಂಗ ಶುದ್ಧವಿಲ್ಲದವರ ಸಂಗ ಸಿಂಗಿ ಕಾಳಕೂಟ ವಿಷವೊ ಕೂಡಲಸಂಗಮದೇವಾ !

೪೩

ಬೇವಿನ ಬೀಜವ ಬಿತ್ತಿ, ಬೆಲ್ಲದ ಕಟ್ಟೆಯ ಕಟ್ಟಿ, ಆಕಳ ಹಾಲನೆರೆದು, ಜೇನ ತುಪ್ಪವ ಹೊಯ್ದಿರೆ ಸಿಹಿಯಾಗಬಲ್ಲದೆ, ಕಹಿಯಾಗಬಹುದಲ್ಲದೆ ? ಶಿವ ಭಕ್ತರಲ್ಲದವರ ಕೂಡೆ ನುಡಿಯಲಾಗದು ಕೂಡಲಸಂಗಮದೇವಾ.

೪೪

ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಯ್ಯಾ, ಜ್ಯೋತಿಯ ಬಲದಿಂದ ತಮಂಧದ ಕೇಡು ನೋಡಯ್ಯಾ, ಸತ್ಯದ ಬಲದಿಂದ ಅಸತ್ಯದ ಕೇಡ ನೋಡಯ್ಯಾ, ಪರುಷದ ಬಲದಿಂದ ಅವಲೋಹದ ಕೇಡ ನೋಡಯ್ಯಾ ಕೂಡಲಸಂಗನ ಶರಣರ ಅನುಭಾವದಿಂದ ಎನ್ನ ಮನದ ಕೇಡ ನೋಡಯ್ಯಾ.

೪೫

ಅತ್ತಲಿತ್ತಲು ಹೋಗದಂತೆ ಹೆಳವನ ಮಾಡಯ್ಯಾ ತಂದೆ, ಸುತ್ತ ಸುಳಿದು ನೋಡದಂತೆ ಅಂಧಕನ ಮಾಡಯ್ಯಾ ತಂದೆ, ಮತ್ತೊಂದ ಕೇಳ-ದಂತೆ ಕಿವುಡನ ಮಾಡಯ್ಯಾ ತಂದೆ, ನಿಮ್ಮ ಶರಣರ ಪಾದವಲ್ಲದೆ ಅನ್ಯ ವಿಷಯಕ್ಕೆಳಸದಂತೆ ಇರಿಸು ಕೂಡಲಸಂಗಮದೇವಾ.

೪೬

ಲಿಂಗದ ನಡೆ, ಲಿಂಗದ ನುಡಿ, ಲಿಂಗದ ನೋಟ, ಲಿಂಗದ ಬೇಟ, ಲಿಂಗದ ಕೂಟ, ಲಿಂಗದಲ್ಲಿ ಮನವಡಗಿರ್ದ ಲಿಂಗಾನುಭಾವಿಗಳ ಸಂಗದಲ್ಲಿರಿಸಿ ಸಲಹಯ್ಯಾ ಎನ್ನ ಅಖಂಡೇಶ್ವರಾ.

೪೭

ನಾನು ಆರಂಭವ ಮಾಡುವೆನೆಯ್ಯಾ ಗುರುಪೂಜೆಗೆಂದು, ನಾನು ಬೆವ್ಹಾರ ಮಾಡುವೆನಯ್ಯಾ ಲಿಂಗಾರ್ಚನೆಗೆಂದು. ನಾನು ಪರಸೇವೆಯ ಮಾಡುವೆನಯ್ಯಾ ಜಂಗಮ ದಾಸೋಹಕೆಂದು. ನಾನಾವ ಕರ್ಮಂಗಳ ಮಾಡಿದರೆಯೂ ಆ ಕರ್ಮಫಲ ಭೋಗವ ನೀ ಕೊಡುವೆಯೆಂಬುದ ನಾನು ಬಲ್ಲೆನು. ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದ ಕ್ರೀಯ ಮಾಡೆನು; ನಿಮ್ಮ ಸೊಮ್ಮಿಂಗೆ ಸಲಿಸುವೆನು, ನಿಮ್ಮಾಣೆ ಕೂಡಲಸಂಗಮದೇವಾ.

೪೮

ಕಾಯಕದಲ್ಲಿ ನಿರತನಾದಡೆ ಗುರುದರುಶನವಾದಡೂ ಮರೆಯಬೇಕು, ಲಿಂಗಪೂಜೆಯಾದಡೂ ಮರೆಯಬೇಕು, ಜಂಗಮ ಮುಂದಿದ್ದಡೂ ಹಂಗು ಹರಿಯಬೇಕು. ಕಾಯಕವೇ ಕೈಲಾಸವಾದ ಕಾರಣ, ಅಮರೇಶ್ವರ ಲಿಂಗವಾಯಿತ್ತಾದಡೂ ಕಾಯಕದೊಳಗು.

೪೯

ಪಣತೆಯೂ ಇದೆ, ಬತ್ತಿಯೂ ಇದೆ, ಜ್ಯೋತಿಯ ಬೆಳಗುವಡೆ ತೈಲವಿಲ್ಲದ ಪ್ರಭೆ ತಾನೆಲ್ಲಿಯದೋ? ಗುರುವಿದೆ, ಲಿಂಗವಿದೆ, ಶಿಷ್ಯನ ಸುಜ್ಞಾನವಂಕುರಿಸದನ್ನಕ್ಕರ ಭಕ್ತಿಯೆಲ್ಲಿಯದೋ? ಸೋಹವೆಂಬುದ ಕೇಳಿ, ದಾಸೋಹವ ಮಾಡದಿದ್ದರೆ, ಅತಿಗಳೆದೆನು ಗೊಹೇಶ್ವರಾ.

೫೦

ಮನದ ಮತ್ಸರವ ಕಳೆದು, ಮನದ ಕೊನೆಯ ಮೊನೆಯ ಮೇಲೆ ಲಿಂಗವ ತ್ರುಳ್ಳಿರಿಸಬೇಕು; ತನುಗುಣವ ಕಳೆದು ಪ್ರಸಾದ ಕಾಯವ ಮಾಡಬೇಕು. ಧನಗುಣವ ಕಳೆದು ಮುಮುಕ್ಷುವೆನಿಸಬೇಕು. ಈ ತ್ರಿವಿಧ ಗುಣಂಗಳ ಕಳೆದು, ತ್ರಿವಿಧ ದಾಸೋಹಿಯಾಗಿರಬೇಕಯ್ಯಾ ನಮ್ಮ ಕೂಡಲ ಚೆನ್ನಸಂಗಮದೇವರಲ್ಲಿ.

॥ ಶ್ರೀ ಚೆನ್ನಮಲ್ಲಿಕಾರ್ಜುನಸ್ವಾಮಿ ಪ್ರಸನ್ನ: ॥

# ತೃತೀಯ ಸಂಪದ – ಮಂಗಲ ಗೀತಮಾಲೆ

## ಪರಮ ಶ್ರೀಜಗದ್ಗುರುಗಳಿಗಾರುತಿ ।

—ಶ್ರೀ ಹರೀಶ್ವರ ಕವಿ

ಎತ್ತುವೆನಾರತಿ ಪರಮ ಜಗದ್ಗುರು ಪಂಚಾಚಾರ್ಯರಿಗೆ ।
ಜಗದ್ಗುರು ಪಂಚಾಚಾರ್ಯರಿಗೆ ॥ಪಲ್ಲವಿ॥

ಪರಶಿವಪಂಚಾಸ್ಯಗಳಿಂದುದಯಿಸಿ ಪರಮತವನು ಜಯಿಸಿ ।
ಪರಿಪೂತವೆನಿಸಿದ ಶಿವಮತವನು ನೆಲೆಗೊಳಿಸಿದ ಪೂಜ್ಯರಿಗೆ ॥೧॥

ಅಂಗಲಿಂಗಗಳ ತತ್ತ್ವವ ಬೋಧಿಸಿ ವಿರತಿ ಸಮೂಹಕ್ಕೆ ।
ಲಿಂಗಾನಂದದಿ ಲಿಂಗದೊಳಡಗಿಹ ಮಹಿಮಾಶೀಲರಿಗೆ ॥೨॥

ಪಾವನಪರತರ ಜಂಗಮರಿಗೆ ಗುರುಸಾರ್ವಭೌಮರಾಗಿ ।
ಕವಿ ಶ್ರೀ ಹರೀಶ್ವರ ಹೃದಯಕಮಲದೊಳು ನೆಲೆಸಿದ ಪೂಜ್ಯರಿಗೆ ॥೩॥

## ಪಂಚಾಸ್ಯ ಪಂಚಾಚಾರ್ಯರಿಗಾರುತಿ ।

....ಶ್ರೀ ಶಂಕರಕವಿ

ಪಂಚಾಸ್ಯ ಪಂಚಾಚಾರ್ಯಾಃ ।
ಮಂಗಲಂ ಕುರುತ ಗುರುವರ್ಯಾ: ॥ಪ॥

ಬ್ರಹ್ಮಾಂಡ ಭುವನಾಚಾರ್ಯಾ: ।
ಪಿಂಡಾಂಡ ಶೋಧನಕಾರ್ಯಾ: ।
ಪಾಖಂಡಖಂಡನಧೈರ್ಯಾಃ
ಪಾಂಡಿತ್ಯಮಂಡಿತ ವೀರ್ಯಾಃ ॥೧॥

ಧೃತವೇದವೇದ್ಯಲಿಂಗಾಃ
ಕೃತಭಕ್ತಪಾಪಭಂಗಾಃ ।
ಹೃತಪಂಚಬಾಣ ಸಂಗಾ:
ವೃತಶಿಷ್ಯರತ್ನಸಂಘಾ: ॥೨॥

ಕಾಲಾದಿ ತತ್ತ್ವಹರಣಾ:
ಫಾಲಾತ್ತದಾಹಕಿರಣಾ: ।
ಮಲಭಾರಬಾಧಿತತರಣಾಃ
ಫಲಕಾಮಿಶಂಕರ ಕರುಣಾಃ ॥೩॥

## ಪಂಚಾಚಾರ್ಯರಿಗಾರತಿ !

—ಶ್ರೀ ವೃಷಭಲಿಂಗಕವಿ

ಪರಮಜಗದ್ಗುರು ಪಂಚಾಚಾರ್ಯರಿಗಾರತಿ ಬೆಳಗುವೆನು ।
ಮುದದಲಿ ಆರತಿ ಬೆಳಗುವೆನು ॥ಪ॥

ತರಿದು ಭವಲತೆಯ ।
ತೊರೆಯುತ ಭೀತಿಯ ಬೇಡುತ ವರಗಳನು ॥ಅ॥

ವೀರಶೈವಷಟಸ್ಥಲಸಿದ್ಧಾಂತವ ಧರೆಯೊಳ್ನೆಲೆಗೊಳಿಸಿ ।
ಚಾರುಮಹಿಮೆಯಂ ತೋರಿಮೆರೆದರಿಗೆ ಸಂತತಮಭಿನುತಿಸಿ ॥೧॥

ಶರಣಾಗತರನು ಪೊರೆವ ಬಿರುದನು ಧರಿಸಿಚರಿಸುವರಿಗೆ ।
ಹರಭಾವದಿ ಸಂಚರಿಸುತೆ ಧರೆಯನು ಪಾವನಗೈದರಿಗೆ ॥೨॥

ಫಾಲನೇತ್ರವದನಾಬ್ಜಜಾತರಿಗೆ ಹರಿಸದಿಕುಂಬಿಟ್ಟು ।
ಬಾಲವೃಷಭಲಿಂಗಾರ್ಚಿತರಿಗೆ ಶ್ರುತಿಶುದ್ಧಮನವಕೊಟ್ಟು ॥೩॥

## ಲಿಂಗೋದ್ಭವರಿಗೆ ಮಂಗಲ ।

—ಶ್ರೀ ಗುರುವೃಷಭಕವಿ

ಮಂಗಲ ಮಯಮಹ ಲಿಂಗೋದ್ಭವರಿಗೆ
ಮಂಗಲ ವೆನ್ನಿರಿ ಸಾಂಗದಲಿ ।
ಅಂಗಜಭಂಗ ಶಿವಾಂಗ ಸಂಗ
ಗುರು ಲಿಂಗಜಂಗಮಾಚಾರ್ಯರಿಗೆ ॥ಪ॥

ಕ್ಷೋಣಿಯುಳುರುತರಲೀಲಾ ವಿಸರದಿ
ಕ್ಷೋಣಿಯ ಪಾವನ ಗೈದವಗೇ ।
ಅಣುತೃಣಕಾಷ್ಟದೊಳನುದಿನ ನೆಲಸಿಹ
ಗಣಕುಲ ನಾಯಕ ರೇಣುಕಗೇ ॥೧॥

ಭೂರಿಮಹಿಮ ಭವದೂರ ನಿಗಮ
ಸುವಿಚಾರ ಕಲುಷ ಸಂಹಾರಕಗೆ ।
ವೀರಶೈವ ಸಮಯಾಂಬುಧಿ ಶಶಿಧರ
ಸಾರಕರುಣಿ ಗುರು ದಾರುಕಗೆ ॥೨॥

ಲೋಕದೊಳುತ್ತಮ ಖ್ಯಾತಿಯಧರಿಸುತ
ಕಾಕುಮತಂಗಳ ಜಯಿಸಿದಗೆ ।
ನಾಕಭವಾರ್ಚಿತ ನಾಕಗಮನಯುತ
ಶೋಕಹರೈಕೋರಾಮರಿಗೆ ॥೩॥

ಚಂಡಮತಂಗಳ ಖಂಡಿಸಿ ಬ್ರಹ್ಮಾ
ಖಂಡ ತತ್ತ್ವವಂ ಬೋಧಿಪಗೆ ।
ಖಂಡಪರಶುವಿನ ತುಂಡಜನಿತ
ಚಿದಖಂಡ ಪಂಡಿತಾರಾಧ್ಯರಿಗೆ ॥೪॥

ಈಶ್ವರ ಭಕ್ತಿಯ ಶಾಶ್ವತಗೊಳಿಸುತ
ವಿಶ್ವಕೆ ಗುರುವಾಗಿರ್ಪನಿಗೆ ।
ವಿಶ್ವನಾಥನೊಳಗುದ್ಭವಿಸಿದಮಹಾ
ವಿಶ್ರುತ ವಿಶ್ವಾರಾಧ್ಯರಿಗೆ ॥೫॥

## ಶ್ರೀ ಜಗದ್ಗುರು ರೇವಣರಿಗೆ ಮಂಗಲ !

—ಶ್ರೀ ತೋಂಟದ ಕವಿ

ಮಂಗಲಂತವ ತುಂಗರೇವಣಗುರು ।
ಜಂಗಮತತಿನಾಥ ಸುಗಾಥ ॥ಪ॥

ರಾಗರಹಿತಭವ ರೋಗವಿನಾಶಕ ।
ಯೋಗಿನಿಕರಗೀತ ವಿಖ್ಯಾತ ॥೧॥

ಸುರಪತಿಹರಿ ಸರಸಿರುಹಭವಾರ್ಚಿತ ।
ಚರಣಪಯೋಜಾತ ಪುನೀತ ॥೨॥

ಅಂಗಜಮದಮಹಾ ತುಂಗಮೃಗಾಧಿಪ ।
ಮಂಗಳಪುರವಾಸ ಕವೀಶ ॥೩॥

## ಆರತಿ ಬೆಳಗಿರಿ ರೇಣುಕಗೆ !

....ಶ್ರೀ ತೋಂಟದ ಕವಿ

ಸಾರಸನಯನೆಯರಾರತಿಯನು ಘನ ।
ಸಾರದಿ ಬೆಳಗಿರಿ ರೇಣುಕಗೆ ॥ಪ॥

ಆರುವಿಕೃತಿಗಳ ಮೀರುತಲುನ್ಮನಿ ।
ಸೇರಿದ ಚರವರ ತಾತನಿಗೆ ॥೧॥

ಸುರಮುನಿಮಾನಸ ಸರಸಿಜದೊಳು ।
ಸಂಚರಿಸುವ ಬಾಲಮರಾಲನಿಗೆ ॥೨॥

ಸಾರಷಟಸ್ಥಲವ ಧಾರಿಣಿಯೊಳುಮಿಗೆ
ತೋರಿದ ರೇವಣಗುರುವರಿಗೆ ॥೩॥

## ದಾರುಕಗಾರತಿ !

—ಶ್ರೀ ಅಮರನಾಥ ಕವಿ

ಜಯ ಜಗದ್ಗುರು ದಾರುಕ ಜಯಗಣ್ಯೈಕ ।
ಝುಷಾಂಕ ಭಯಾನಕ ॥ಪ॥

ವಟನಾಮಕಸುಕ್ಷೇತ್ರ ನಟನಧುರೀಣಪವಿತ್ರ
ಕಿಟಹರ ವಟುವರ ಜಟಾಧರ ॥೧॥

ಶೃತಿನುತ ವೀರಶೈವಮತ ಪರಿವರ್ಧನಭಾವ ।
ಜಿತಭವ ತತಶಿವ ವ್ರತೋತ್ಸವ ॥೨॥

ಭುವಿ ಶಮಿಪುರ ಸುರನಾಥ ಕವಿನುತಪದವನ ಜಾತ
ಛವಿಯುತ ಸುವಿರತ ವಾಸಾನ್ವಿತ ॥೩॥

## ಜಯ ಏಕೋರಾಮಗೆ !

—ಶ್ರೀ ಕಾಶೀನಾಥ ಶಾಸ್ತ್ರಿಗಳು

ಏಕೋರಾಮ ಜಯ ಗುರುರಾಮ ।
ರಾಮೇಶಲಿಂಗ ವಿರಾಮ ॥ಪ॥

ರಾಮಾದಿವಂದಿತಪಾದ ಸೋಮಾದಿ ಸಂಸ್ಥಿತ ।
ಮೋದ ಸಾಮಾದಿ ವೇದ ಬೋಧ ॥೧॥

ವೈರಾಗ್ಯಪೀಠಾಧೀಶ ವೈರಾಗ್ಯಸಂಪತ್ಕೋಶ ।
ಸೌಭಾಗ್ಯ ಕಾರಣೇಶ ॥೨॥

ಭುವನಾಲಿ ಪಾಲನಲೋಲ ಕವಿಜಾಲ ।
ಕೀರ್ತಿತ ಲೀಲ ಕವಿ ಕಾಶೀನಾಥಪಾಲ ॥೩॥

## ಜಯಪಂಡಿತಾರಾಧ್ಯ !

—ಶ್ರೀ ಸಂಗಮೇಶ್ವರ ಪಟ್ಟಾಧ್ಯಕ್ಷರು

ಜಯ ಪಂಡಿತರಾಧ್ಯ ಜಯ ಜಯ ಸುಗುಣಸಾಧ್ಯ ।
ಜಯ ಚಿತ್ರಭಾಹೃದ್ಯ ಜಯ ವೇದತತಿ ವೇದ್ಯ ॥ಪ॥

ಅಹರಹಃಸ್ಫುರದ್ದೇಹ ದಹಿತಪ್ರಖರಮೋಹ ।
ಮಹಿತ ಶ್ರೀ ಗಿರಿಗೇಹ ಪ್ರಹತ ರಿಪುಸಂದೋಹ ॥೧॥

ಅಮಿತಶಮ ನಿಕ್ಷೇಪ ಶಮಿತ ತ್ರಿವಿಧತಾಪ ।
ದಮಿತೇಂದ್ರಿಯ ಪ್ರತಾಪ ಪ್ರಮಥೇಶ ಸ್ವರೂಪ ॥೨॥

ಸಂಗಮಲಸತ್ಸಗಮ ಸಂಗೀತ ಶ್ರುತಿಪ್ರೇಮ ।
ಮಂಗಲಮಯಾನುಪಮ ಲಿಂಗಯೋಗವಿರಾಮ ॥೩॥

卐

## ಶ್ರೀ ವಿಶ್ವಾರಾಧ್ಯರಿಗೆ ಮಂಗಲ !

—ಶ್ರೀ ಕಾಶೀನಾಥ ಕವಿ

ಶ್ರೀ ವಿಶ್ವಾರಾಧ್ಯಾಯ ಮಂಗಲಂ
ಶಿವವಿಶ್ವೈಕಪಾಲಾಯ ಮಂಗಲಂ ।
ವಿಶ್ವೇಶಜಾತಾಯ ವಿಶ್ವಾದಿಬೀಜಾಯ
ಶ್ರೀ ವಿಶ್ವವಂದ್ಯಾಯ ಮಂಗಲಂ ॥೫॥

ಚರವೃಂದವಂದ್ಯಾಯ ಮಂಗಲಂ
ವರ ಚರನೀತಿಬೋಧಾಯ ಮಂಗಲಂ ।
ಗುರುರೂಪಧಾರಾಯ ಗುರುರಾಜರಾಜಾಯ
ಪರಿಪೂತದೇಹಾಯ ಮಂಗಲಂ ॥೧॥

ಭವಮೂಲಭಂಗಾಯ ಮಂಗಲಂ ।
ಶಿವಲಿಂಗ ಸಂಗಾಯ ಮಂಗಲಂ ॥
ಭವಮಂಗಲಾಂಗಾಯ ಶಿವಪಿಂಗಜೂಟಾಯ
ಕವಿತುಂಗಸೇವ್ಯಾಯ ಮಂಗಲಂ ॥೨॥

ಕಾಶೀಪುರೇಶಾಯ ಮಂಗಲಂ ।
ಕವಿಕಾಶೀನಾಥೇಶಾಯ ಮಂಗಲಂ ॥
ಕ್ಲೇಶಾವಹಾರಾಯ ಪಾಶಪ್ರಮೋಚಾಯ ।
ಶ್ರೀ ಶಾದಿಮಾನ್ಯಾಯ ಮಂಗಲಂ ॥೩॥

## ಜಯ ಜಯ ಹರಮಂಗಲ !

—ಶ್ರೀ ಬಾಲಲೀಲಾ ಮಹಾಂತ ಶಿವಯೋಗಿಗಳು

ಮಂಗಲಮಯ ಮಹಂತ । ಲಿಂಗದೇಶಿಕನೆ
ಜಯ ಜಯ ಹರ ಮಂಗಲಂ ||ಪಲ್ಲ||

ಜೀವಪರಮೈಕ್ಯ ಭಾವವ ತೋರಿದ
ಕೋವಿದ ಮದ್ಗುರು ದೇವ ಸುಂದರನೇ
ಜಯ ಜಯ ಹರ ಮಂಗಲಂ ||೧||

ಲಿಂಗವ ಪೂಜಿಸಿ ಲಿಂಗವೆಯಾಗುವ
ಇಂಗಿತವರುಪಿದ ಕಂಗಳಾಲಯನೆ
ಜಯ ಜಯ ಹರ ಮಂಗಲಂ ||೨||

ನಾಮ ರೂಪು ಕ್ರಿಯಾ ಸೀಮೆಯ ಮೀರಿದ
ಸ್ವಾಮಿ ಶ್ರೀ ಮಹಂತೇಶ ಪ್ರೇಮಿದಯಾಳು
ಜಯ ಜಯ ಹರಮಂಗಲಂ ||೩||



## ಶಿವಮಂಗಲವನು ಕೊಡು !

ಶಿವಮಂಗಲವನು ಕೊಡುಬೇಗ
ಭವದುಃಖದಿ ಬಳಲುವೆವೀಗ ।
ಭುವಿಗವತರಿಸಿದ ಕಾರಣವ
ಜವದೊಳು ನೆನೆಯುತ ಗುರುದೇವ ॥ಪ॥

ಮನುಜ ಜನ್ಮವನು ತೊಟ್ಟಿಹೆವು
ಘನಮಹಿಮರ ಪಥ ಬಿಟ್ಟಿಹೆವು ।
ಮನದಿ ಹೀನಗುಣ ತೊಡರಿಹವು
ಮುನಿವಂದ್ಯನೆ ನಮಿಸುತ್ತಿಹೆವು ॥೧॥

ಹುಟ್ಟಿ-ಹುಟ್ಟಿ ಸಾಯ್ವುದನೋಡಿ
ಕಷ್ಟತರದಿ ಬಹುಚರಿಸ್ಯಾಡಿ ।
ದುಷ್ಟರೆನಿಸಿಕೊಂಬುದು ನೋಡಿ
ಶಿಷ್ಟನೆ ನೀನತಿ ದಯಗೂಡಿ ॥೨॥

ಇದ್ದ ಗುಣಗಳೆಲ್ಲವ ಮರೆಸಿ
ಶುದ್ಧ ಗುಣದಿ ಮನವನ್ನಿರಿಸಿ ।
ಸಿದ್ಧರಾಮ ಗುರು ದಯಕರಿಸಿ
ತಿದ್ದುವದತಿ ನೀ ಮುದವಿರಿಸಿ ॥೩॥

## ಗುರು ತೋಂಟದಾರ್ಯನಿಗೆ ಮಂಗಲ ।

—ಹಾನಗಲ್ಲ ಶ್ರೀ ಕುಮಾರಸ್ವಾಮಿಗಳು

ಜಯ ಶಾಂಭವಯೋಗ ಸಮಾಧಿಕಲಾ
ಗುರು ತೋಂಟದಾರ್ಯ ಜಯಗುರು ತೋಂಟದಾರ್ಯ ॥ಪ॥

ದೇವನಿರಂಜನ । ಭಾವಜಭಂಜನ
ಭಾವಸುಭಾಜನ । ಭಾವವಿನೋದನ ॥೧॥

ಆಸ್ತತಮೋಭಯ ವಿಸ್ತೃತಮಾಭರ
ಶಸ್ತ್ರಸುಚರಿತ ನಿರಸ್ತಭಯ ಪ್ರಸ್ತುತ
ಜನವಿಧ್ವಸ್ತ ಭಾವಾಮಯ ತೋಂಟದಾರ್ಯ ॥೨॥

ಬಾಢಮಮ ಪ್ರಭು ಗೂಢ ಸಮಾಧಿ ಗ-
ತೇಡಿತ ಪದಯಡೆಯೂರ ತಲೆ ।
ಯೋಗಿಮಣೀ ಶಿವಯೋಗ ಸುಮಂದಿರ ತೋಂಟದಾರ್ಯ ॥೩॥

## ಕಾರುಣ್ಯಾಮೃಗಕರ ದೇವಗೆ !

ಕರ್ಪುರಾರತಿ ಬೆಳಗಿರೆ
ಕಾರಣ್ಯಾಮೃಗಕರ ದೇವಗೆ ||ಪಲ್ಲ||

ನೀಲಕಂಧರ ನಿಗಮಗೋಚರ
ಬಾಲಚಂದ್ರಾಭರಣಗೆ
ಬಾಲಗೊಲಿದನು ಹಾಲಸವಿದನು
ಲೋಲ ಶ್ರೀಗುರು ಕಾಯಗೆ ||೧||

ವಾರಿಜೋದ್ಭವ ಶಿರವಹಂದಿಹ
ಮಾರಹರ ಮಹದೇವಗೆ
ಘೋರದುರಿತವ ದೂರಮಾಡುವ
ಶೂರ ಷಣ್ಮುಖನಯ್ಯಗೆ ||೨||

ಶರಣಜನರಿಗೆ ವರವನಿತ್ತಿಹ
ಪರಮ ಪಾರ್ವತಿಯರಸಗೆ
ಧರೆಯೊಳಧಿಕವಾದ ಅಥಣಿಯ
ಪುರದ ಶ್ರೀ ಶಿವಯೋಗಿಗೆ ||೩||



## ಜ್ಯೋತಿ ಬೆಳಗುತಿದೆ.

—ಶ್ರೀ ನಿಜಗುಣ ಶಿವಯೋಗಿಗಳು

ಜ್ಯೋತಿ ಬೆಳಗುತಿದೆ ವಿಮಲಪರಂಜ್ಯೋತಿ ಬೆಳಗುತಿದೆ
ಮಾತುಮನಂಗಳಿಂದತ್ತತ್ತ ಮೀರಿದ
ಸಾತಿಶಯದ ನಿರುಪಾಧಿಕ ನಿರ್ಮಲ ||ಪ||

ಶಿವಧರ್ಮನಾಳವೆಂತೆಂಬ ಕಂಬದ ಮೇಲೆ
ಸುವಿವೇಕ ಹೃದಯಾಬ್ಜ ಪಣತೆಯೊಳು
ಸವೆಯದ ಸದ್ಭಕ್ತಿರಸತೈಲ ತೀವಿದ
ಪ್ರವಿಮಲ ಕಳೆಯೆಂಬ ಬತ್ತಿವಿಡಿದು ದಿವ್ಯ ||೧||

ಮುಸುಕಿದ ವಿಷಯ ಪತಂಗ ಬಿದ್ದುರುಳೆ ತಾ-
ಮಸಬುದ್ಧಿಯೆಂಬ ಕತ್ತಲೆಯಳಿಯೆ
ಮಸಗಿ ಸುಜ್ಞಾನವೆಂತೆಂಬ ಮಹಾಪ್ರಭೆ
ಪಸರಿಸಿ ಮಾಯಾಕಾಳಿಕ ಪೋರ್ದದನುಪಮ ||೨||

ಪ್ರಣವಾಕಾರದ ಗುಣಮೂರು ಮುಟ್ಟದ
ಗಣನೆಗತೀತಾರ್ಥವೆನೆ ತೋರುವ
ಅಣುಮಾತ್ರ ಚಲನೆಯಿಲ್ಲದ ಮೋಕ್ಷಚಿಂತಾ
ಮಣಿಯೆನಿಸುವ ಶಂಭುಲಿಂಗವೆ ತಾನಾದ ||೩||



## ಕರ್ಪುರಾರತಿಯನು ಬೆಳಗಿರೆ !

—ಶ್ರೀ ಘನಮಠ ನಾಗಭೂಷಣ ಶಿವಯೋಗಿಗಳು

ಕರ್ಪುರಾರತಿಯನು ಬೆಳಗಿ ಸರ್ಪಭೂಷಗೆ ।
ಸರ್ಪಕಾರಿ ವಿಜೇತ ಶೌರ್ಯನಿಗೆ ಪರಮೇಶಗೆ ॥ಪಲ್ಲ॥

ಸೂರಕರ ಸುಕೋಟಿ ಪ್ರಭಾಪಾರೆವಾರಗೆ ।
ಸಾರವೀರಭಕ್ತ ಹೃದಯವಿಹಾರ ಧೀರಗೆ ॥೧॥

ತ್ರ್ಯಕ್ಷದಕ್ಷ ಶಿಕ್ಷ ಮೋಕ್ಷಾಪೇಕ್ಷರಕ್ಷಗೆ ।
ಪಕ್ಷಿರಥಸ ಪಕ್ಷನರವಳಕ್ಷದೇಹಗೆ ॥೨॥

ದುರಿತಶರಧಿಮರುತ ಶರಣಭರಿತ ಶಾಂತಗೆ ।
ವರದಕರ ಘನಮಠವಾಸ ಗುರು ಮಹಾತ್ಮಗೆ ॥೩॥



## ಬೆಳಗುವೆ !

—ಕಡಕೋಳದ ಶ್ರೀ ಮಡಿವಾಳೇಶ್ವರರು

ಜ್ಞಾನಸ್ಪೂರ್ಣಂ ಜಗಂಜ್ಯೋತಿ ।
ನಿರ್ಮಳವಾದ ಮನವೆ ಕರ್ಪೂರದಾರತಿ ॥
ಅನುದಿನ ಗುರುವಿನ ಅನುಗೂಡಿ ಭಕ್ತೀಲಿ ।
ಜನನ ಮರಣ ರಹಿತ ಜಂಗಮಗೆ ಬೆಳಗುವೆ ॥ಪಲ್ಲ॥

ನಾನಾ ಜನ್ಮದ ಕತ್ತಲಿ ಕಳೆದಳಿದು ಜೇಗ ।
ಮಾನವ ಜನ್ಮದ ಬೆಳಕೀಲಿ ॥
ಹೀನವಾಸನ ಗುಣ ಹಿಂದುಳಿದು ಗುರುವಿನ ।
ಜ್ಞಾನವೆ ಗತಿಯೆಂದು ಮನವೊಪ್ಪಿ ಬೆಳಗುವೆ ॥೧॥

ನಾಸ್ತೀನೆಂಬುದು ಬಿಡಿರಿ ನರಕವು ಪ್ರಾಪ್ತಿ ।
ಜ್ಞಾನಿಗಳೊಡನಾಡಿರಿ ॥
ಸ್ವಾನುಭಾವದ ಸುಖ ತಾನೆ ಕೈ ಸಾರುವುದು ।
ಅನುದಿನ ಲಿಂಗಕ್ಕೆ ಮನಮುಟ್ಟಿ ಬೆಳಗುವೆ ॥೨॥

ಅಷ್ಟಾವರಣ ಸುಲಭ ಮಾನವ ಜನ್ಮ ।
ಹುಟ್ಟಿಬರುವದು ದುರ್ಲಭ ।
ಇಟ್ಟಾನೂ ಗುರುಹಸ್ತಹುಟ್ಟಿದ ಮಗ ಸಿದ್ಧ । ಹೆಸ-
ರಿಟ್ಟು ಬೆಳಗುವೆ ಮಹಾಂತ ಶಿವಯೋಗಿಗೆ ॥೩॥

## ಜಯಮಂಗಲಮಯ ಶಿವಲಿಂಗ.

—ಹಾನಗಲ್ಲ ಶ್ರೀ ಕುಮಾರ ಸ್ವಾಮಿಗಳು

ಜಯಮಂಗಲಮಯ ಶಿವಲಿಂಗ ||ಪ||

ಗುರುಕರಯೋಗಾ | ದುರುರೂಪಾಂಚಿತ |
ಪರಶಿವ ಭಕ್ತ ಸುದೇಹಗೇಹೇಷ್ಟಲಿಂಗ ||೧||

ದಿನಕರ ಹಿಮಕರ | ನ್ಯೂನ ಸಂಗತ ಜಾತ |
ಮನೋಂಬುಜವಾಸ ಸಕಲ ನಿಷ್ಕಲ ಚಿಲ್ಲಿಂಗ ||೨||

ಭಾವಗಮ್ಯರೂಪ | ದೇವದಹರ ಪ್ರಭೊ
ಪಾವನ ಶಿವಯೋಗ ಮಂದಿರ ಭಾವಲಿಂಗ ||೩||

## ಆರತಿ ಬೆಳಗಿರಿ ಈಶ್ವರಗೆ.

—ಶ್ರೀ ಘನಮಠ ನಾಗಭೂಷಣ ಶಿವಯೋಗಿಗಳು

ಆರತಿ ಬೆಳಗಿರೀಶ್ವರಗೆ ಸ- | ಶರೀರ ಸಾಂಬನಿಗೆ ||ಪಲ್ಲ||

ಸಾರ ಷಟ್‌ಸ್ಥಲ ವಿಚಾರಮನೀವ- |
ಪಾರಮಹಿಮ ಭವದೂರ ವೀರನಿಗೆ ಸುಕುಮಾರಿಯರ್ ಭವಗೆ ||೧||

ಅಂಗಗುಣಂಗಳ ಹಿಂಗಿದ ಭಕ್ತರೋಳ್ ಸಂಗವಾಗಿಹ |
ಮಹಾಲಿಂಗದೇವನಿಗೆ ಕೋಮಲಾಂಗಿಯರ್ ಮೃಡಗೆ ||೨||

ಸತತ ಶ್ರೀ ಘನಮಠಪತಿ ಜಗದೀಶ |
ಗತಿನೀನೆಯೆಂದು ಸನ್ನುತಿಸುತಾದ್ವಯಗೆ ಶಿವಸತಿಯರು ಹರಗೆ ||೩||

## ಜಯಮಂಗಳ ಪಾಡುವೆ !

—ಶ್ರೀ ಬಾಲಲೀಲಾ ಮಹಾಂತ ಶಿವಯೋಗಿಗಳು

ಜಯ ಮಂಗಳಂ ನಿತ್ಯ ಶುಭಮಂಗಳಂ
ಜಯ ಜಯತು ಶಿಶು - ಮಹಂತಲಿಂಗೇಶಗೆ ||ಪಲ್ಲ||

ಧರೆಯ ಭಕ್ತರ ಮಹೇಶ್ವರರುಗಳ ಪುತ್ರನಿಗೆ
ಶರಣಬಸವಾದಿ ಪ್ರಮಥರ ಕಂದಗೆ
ಪರಶಿವನ ಪಾರ್ವತಿಯ ತೊಡೆಯ ಮೇಲಾಡುತಲಿ
ಹರುಷಾಬ್ಧಿ ಹೆಚ್ಚಿಸುವ ಗುರುಪುತ್ರಗೆ ||೧||

ಆಕಾಶವನು ಮೋಡ ಮುಸುಕಿದರೆ ಕೆಡದಂತೆ
ಏಕಾಗ್ರಚಿತ್ತದಲಿ ಮನವನುಡುಗಿ
ಬೇಕು-ಬೇಡೆಂಬೆರಡು ಭವಬೀಜಗಳ ಹುರಿದು
ಲೋಕದೊಳಗಿದ್ದು ಇಲ್ಲದ ಮಹಿಮಗೆ ||೨||

ಹ್ಯಾಂಗೆ ಮಾಳ್ಪರು ಹಾಂಗೆ ಸಕಲ ಉಪಚಾರಗಳ
ಮಂಗಲದ ಶಿಶುವಾಗಿ ಕೈಕೊಳುತಲಿ
ಬಂಗಾರ ಕಬ್ಬುನವು ಹಿರಿಕಿರಿದು ಸಮಗಂಡ
ಲಿಂಗ ಮಹಂತೇಶ್ವರ ಜಗತ್ಪುತ್ರಗೆ ||೩||



## ಲಿಂಗಕೆ ಆರತಿ.

—ಹಾನಗಲ್ಲ ಶ್ರೀ ಕುಮಾರಸ್ವಾಮಿಗಳು

ಜಯಲಿಂಗಾ ಜಯಲಿಂಗಾ
ಜಯಮಂಗಲ ಚಿಲ್ಲಿಂಗಾ
ಜಯ ಪರತರ ಶಿವಲಿಂಗಾ ||ಪಲ್ಲ||

ಕರದೀ ಪಾಸಿಭ ಲಿಂಗಾ
ವರಬಿಂದು ಘೃಣಿಲಿಂಗ
ಸುರಚಿರಶಿವರುಚಿಲಿಂಗಾ ||೧||

ಭೂವನಮಯ ಪತಿಲಿಂಗಾ
ಭಾವಕ ಮದ್ಗುರು ಲಿಂಗಾ
ಭಾವಕ ನವ ಮಹಲಿಂಗಾ ||೨||

ಶಿವಯೋಗಿಷ್ಟದ ಲಿಂಗಾ
ಶಿವಹೃದಯಾ ಪ್ರಭುಲಿಂಗಾ
ಶಿವಯೋಗಾಲಯಲಿಂಗಾ ||೩||



ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು

# - ಗ್ರಂಥಋಣ -

ಶ್ರೀ ಜಗದ್ಗುರು ಪಂಚಾಚಾರ್ಯ ಸ್ತೋತ್ರ ರತ್ನಾಕರ
ಸಂ.-- ಪಂಡಿತ ಶ್ರೀ ಕಾಶೀನಾಥ ಶಾಸ್ತ್ರಿಗಳು

ಕೈವಲ್ಯ ಕಲ್ಪವಲ್ಲರಿ
—ಶ್ರೀ ಸರ್ಪಭೂಷಣ ಶಿವಯೋಗಿಗಳು
ಸಂ. ಪಂಡಿತ ಶ್ರೀ ನಾಗಭೂಷಣ ಶಾಸ್ತ್ರಿಗಳು

ಘನಮಠೇಶ ತತ್ತ್ವಪದಗಳು
—ಶ್ರೀ ನಾಗಭೂಷಣ ಶಿವಯೋಗಿಗಳು
ಪ್ರಕಾಶಕರು. ಶ್ರೀ ನಿ.ಪ್ರ. ಮಲ್ಲಿಕಾರ್ಜುನ ದೇಶಿಕೇಂದ್ರ
ಮಹಾಸ್ವಾಮಿಗಳು ಸಂತೇಕೆಲ್ಲೂರು

ಸ್ವರವಚನಗಳು
—ಕಡಕೋಳದ ಶ್ರೀ ಮಡಿವಾಳೇಶ್ವರರು
ಸಂ. ಡಾ|| ಮಲ್ಲಿಕಾರ್ಜುನ ಶಿ. ಲಠ್ಠೆ

ಭಕ್ತಿಗೀತೆಗಳು.
ಪ್ರಕಾಶಕರು —ಶ್ರೀ ಮುರುಘಾಮಠ ಮೃತ್ಯುಂಜಯ ನಗರ ಧಾರವಾಡ

ತತ್ತ್ವಪದಗಳು—ಶ್ರೀ ಶಿಶುನಾಳ ಶರೀಫ ಸಾಹೇಬರು

ಶ್ರೀ ಶಿವಯೋಗಮಂದಿರ ಭಜನಾವಳಿ.
ಪ್ರಕಾಶಕರು—ಶ್ರೀ ರೇವಣಸಿದ್ಧೇಶ್ವರ ವಾಚನಾಲಯ, ಶಿವಯೋಗಮಂದಿರ

ಚೆನ್ನ ಚೇತನ ಪ್ರಕಾಶನ.
ಬೃಹಚ್ಛಿಲಾಮಠ [ಹಿರೇಕಲ್ಮಠ] ಹೊನ್ನಾಳಿ-೫೭೭೨೧೭,

## .... ಹೊನ್ನರಳಿಯ ದಳಗಳು ....

| ದಳ. | ಪುಸ್ತಕ | | ಬೆಲೆ. |
|---|---|---|---|
| ೧) | ವೀರಶೈವ ಪಂಚಪೀಠ ಪರಂಪರೆ<br>ಡಾ॥ ಚಂದ್ರಶೇಖರ ಶಿವಾಚಾರ್ಯರು<br>ಅಮರೇಶ್ವರಮಠ, ಗುಳೇದಗುಡ್ಡ | ೧೯೮೮ | ೧೫-೦೦ |
| ೨) | ಶ್ರೀ ಶ್ರೀಶೈಲ ಮಲ್ಲಿಕಾರ್ಜುನ ಸುಪ್ರಭಾತ<br>"ವರಕವಿ" ಶ್ರೀಶೈಲ ಜಗದ್ಗುರು<br>ವಾಗೀಶ ಪಂಡಿತಾರಾಧ್ಯರು | ೧೯೮೯ | ೧-೦೦ |
| ೩) | ಶ್ರೀ ಚೆನ್ನಮಲ್ಲಿಕಾರ್ಜುನ ಪುರಾಣ<br>'ಬಾಲಬೃಹಸ್ಪತಿ' ಶ್ರೀ ಗಂಗಾಧರ<br>ಶಿವಾಚಾರ್ಯರು ಮಠಬಜಡೆಯಮಠ ಗುಡೂರ | ೧೯೮೯ | ೩೦-೦೦ |
| ೪) | ದೀಕ್ಷೆಯಿಂದಲೇ ಮೋಕ್ಷ<br>ಪ್ರಾ. ಅ.ಸಿ. ಹಿರೇಮಠ ರಾಣೇಬೆನ್ನೂರು | ೧೯೮೯ | ೩-೫೦ |
| ೫) | ಸೂಳ್ನುಡಿ ಸಂಪದ.<br>ಪ್ರಾ. ಅ.ಸಿ. ಹಿರೇಮಠ ರಾಣೇಬೆನ್ನೂರು | ೧೯೯೦ | ೬-೦೦ |

---

**ಮುಂಬರುವ ಕೃತಿ.**

೬) ಹೊನ್ನಾಳಿ ಹಿರಿಯಕಲ್ಮಠದ ಗುರು ಪರಂಪರೆ.
ಶ್ರೀ ಬಿ. ಶಾಂತವೀರಯ್ಯ ಅಗರಬನ್ನಿಹಟ್ಟಿ

---

ಶ್ರೀ ಮಂಜುನಾಥ ಪ್ರಿಂಟರ್ಸ, ರಾಣೆಬೆನ್ನೂರು ಫೋನ 6002